ಕನ್ನಡನಾಡಿನ ಬೆಳ್ಳಿಯ ಹಬ್ಬದ ನುಡಿಮಣಿ ಕಾಣಿಕೆ

# ಮಧುರ ಚಿಂತನ

ಎಂ. ಜಿ. ನಂಜುಂಡಾರಾಧ್ಯ

ಪ್ರಬೋಧ ಪುಸ್ತಕಮಾಲೆ
ಮೈಸೂರು

## ಮಧುಪರ್ಕ

ಕೈಕಾಲ್ಗೆ ನೀರಿತ್ತು ಮುಖಮಜ್ಜನವಗೈಸಿ,
ಜೇನೊಸರನುಣಬಡಿಸಿ ತಣಿಸುವಂತೆ,
ಹಿರಿಯ ಕವಿ ಜೇನ್ನುಡಿಯ ಕುಡಿಟ್ಟು ಕನ್ನಡದೆ
ಬಂದವರನುಪಚರಿಪನಮರವಾಣಿ,

‡ ‡ ‡

## ನುಡಿ ಕಾಣಿಕೆ

ಕನ್ನಾಡಿನೊಕ್ಕೂಟ ಬೆಳ್ಳಿ ಹಬ್ಬದ ಬೆಡಗು
ಚೆನ್ನೆಸೆವ ಕನ್ನಾಡ ನುಡಿಯ ರಾಣಿ;
ಕನ್ನಡಿತಿ ತಳಿರಡಿಗೆ ಮುಡಿಯಿಟ್ಟು ಮಣಿದೆರಗಿ
ನುಡಿಗಾಣಿಕೆಯ ನಿಟ್ಟನಮರವಾಣಿ

“ ಅಮರವಾಣಿ ”

## ಮಧುಪರ್ಕ

ಕೈಕಾಲ್ಗೆ ನೀರಿತ್ತು ಮುಖಮಜ್ಜನವಗೈಸಿ,
ಜೇನ್ಮೊಸರನುಣಬಡಿಸಿ ತಣಿಸುವಂತೆ,
ಹಿರಿಯ ಕವಿ ಜೇನ್ನುಡಿಯ ಕೂಡಿಟ್ಟು ಕನ್ನಡದೆ
ಬಂದವರನುಪಚರಿಪನಮರವಾಣಿ,

‡ ‡ ‡

## ನುಡಿ ಕಾಣಿಕೆ

ಕನ್ನಾಡಿನೊಕ್ಕಲ್ಮಟ ಬಿಳಿಯ ಹಬ್ಬದ ಬೆಡಗು
ಚನ್ನೆಸೆವ ಕನ್ನಾಡ ನುಡಿಯ ರಾಣಿ;
ಕನ್ನಡಿತಿ ತಳಿರಡಿಗೆ ಮುಡಿಯಿಟ್ಟು ಮಣಿದೆರಗಿ
ನುಡಿಗಾಣಿಕೆಯ ನಿಟ್ಟನಮರವಾಣಿ

"ಅಮರವಾಣಿ"

# ಅರಿಕೆ

ಇದೊಂದು "ಮುಕ್ತಕ ಮಾಲೆ," ಐದೆಸಳ ಐದು ನೂರು ನುಡಿಮಣಿ ಮಾಲೆ! ಅದರ ಹೆಸರೇ ಹೇಳುವಂತೆ ಆಗಾಗ ಮನಸ್ಸಿನಲ್ಲಿ ಚಿಂತಿಸಿದ, ಮೂಡಿದ ಮಧುರೋಕ್ತಿ ರಸಮಂಜರಿ! ಹಿರಿಯ ಕವಿಸೂಕ್ತಿ ಸುಮಗಳನ್ನು ತಿರಿತಂದು ಕನ್ನಡಿಸಿ, ಜೊತೆಗೆ ಮರುಗವನ್ನೂ ಸೇರಿಸಿ, ಸರಗೊಳಿಸಿ, ನುಡಿ ದೇವಿಯ ತಳಿರಡಿಗೆ ಸಿಂಗರಿಸಿದ ರಸ ಕುಸುಮ ಮಂಜರಿ! ಇಲ್ಲಿ ಬರುವ ಅನುಭವೋಕ್ತಿಗಳ ರಸಸುಮ ಮಾಲೆ ಕನ್ನಡಿಗರ ಕಂಠಮಾಲೆಯೆನಿಸಿ ಶೋಭಿಸಿದರೆ ಬರೆದವನ ಬದುಕು ಸಾರ್ಥಕ, ಓದುಗರ ಸೌಕರ್ಯಕ್ಕಾಗಿ ಕಠಿನ ಪದಗಳ ಅರ್ಥ, ಕನ್ನಡ ನುಡಿಗಟ್ಟುಗಳು ಮತ್ತು ಪದ್ಯಗಳ ಅಕಾರಾದಿ ಸೂಚಿಗಳು ಇಲ್ಲಿವೆ. ಇದರಲ್ಲಿನ ಅನೇಕ ಮುಕ್ತಕಗಳು ಹಲವಾರು ಮಾಸಿಕಗಳಲ್ಲಿ "ಮಧು ಬಿಂದು" ವೆನಿಸಿ ಬೆಳಕು ಕಂಡಿವೆ. ಅವರಿಗೆಲ್ಲ ನನ್ನ ನೆನಕೆಗಳು

ಇಂತು

೧-೧೧-೯೮೧
ಮೈಸೂರು

ಎಂ. ಜಿ. ನಂಜುಂಡಾರಾಧ್ಯ
"ಅಮರವಾಣಿ"

# ಮಧುರ ಚಿಂತನ

## ಎಸಳು ೧

೧

ನೀರನೆರಳಲಿ ಪೊಳೆವ ಗಿರಿಜೆ ಮುಖದರ್ಶನದೆ
ಮನವರಳಿ ಕೈ ಸಡಲಿ ಸುರಿಯೆ ಜಲವು,
ಬೆಮರಹನಿಪೂರದಿಂ ತುಂಬಿ ತುಳುಕುತಲಿರುವ
ಸಲಿಲಾಂಜಲಿಯು ಜಯಿಕೆ ಪರಮ ಶಿವನ.

೨

ವಿಶ್ವಪುದ್ಯಾನದೊಳಗರಳಿರುವ ನಲ್ನುಮವ
ಸಂಗ್ರಹಿಸಿ ಕನ್ನಡಿಸಿ ಮರುಗ ಬೆರಸಿ,
ಸರಗೊಳಿಸಿ ಕನ್ನಡಿತಿ ಸಿರಿಮುಡಿಗೆ ಸಿಂಗರಿಸಿ
ನಲಿವ ಕನ್ನಡಕುವರನಮರವಾಣಿ

೩

ಸಂಸಾರ ವಿಷವೃಕ್ಷದೊಳು ಬಿಟ್ಟ ಪಣ್ಗಳಲಿ
ಸುಧೆಗೆ ಸಮಮೆನಿಸಿರ್ಪ ಫಲಗಳೆರಡು ;
ನಲ್ನುಡಿಯ ರಸವಿಸರಮಾಸ್ವಾದಿಸುವುದೊಂದು
ಸಜ್ಜನರ ಸಹವಾಸಮೆಂಬುದೊಂದು

೪

ಬಹುಜನರು ಕುಡಿದರುಂ ಕಡಿಮೆಯಾಗದು ಮತ್ತೆ
ವಿಕೃತಿ-ವಿರಸಗಳಿಲ್ಲವದರ ಬಳಿಯೊಳ್,
ಜಾಡ್ಯಹರ ರುಚಿಕರಂ ಸಂತೃಪ್ತಿಯೆಸಗುವೀ
ನಲ್ನುಡಿಗೆ ಸಮನಹವೆ ರಸೆಯ ರಸಗಳ್,

೫

ಜೀವನವೊ ಕಡು ಕಿರಿದು, ಕಾಲವಿದುವತ್ಯಲ್ಪ
ಸೇರುವೆಡೆ ದೂರಿಹುದು ಪಥಿಕ! ನೀನು
ನಿಲ್ಲದೆಯೆ ನಡೆ ಮುಂದೆ ಕಲ್ಲುಮುಳ್ಳುಗಳುಂಟು
ಆವೆ-ಮೊಲಗಳ ಪಯಣ ನೆನೆಯೊ ನೀನು!

೬

ಕಳಕೊಂಡ ರತ್ನಮಂ ಪುಡುಕಲಿಲ್ಲೈತಂದು
ಡೊಂಬರಾಟವ ಕಂಡು ತನ್ನ ಮರೆತು,
ಬನ್ನಬಡುತಿಹ ಮನುಜಕುನ್ನಿಯನು ನದೆಬಡಿಯೊ
ಚಿನ್ನವನು ಕಸಕೆಸೆವ ಪರಿಯ ಕಂಡು.

೭

ಗಾಜಿನೀ ಮನೆ ಕಟ್ಟಿ ಜೀವವನು ತುಂಬಿಹನು
ನಾಜೋಕಿನಿಂ ಬಳಸು ಜೋಕೆ ಮತ್ತೆ!
ಸೋಜಿಗವದೇಕಿನ್ನು ಬಾಡಿಗೆಯು ಮಿಗಿಲೆಂದು
ರಾಜಿಮಾಡಿಕೊ ಮನೆಯ ಒಡೆಯನಲ್ಲಿ.

೮

"ಕಡಮೆ ಪರಿಕರವಿರಲು ಪಯಣಸುಖಕರಮಕ್ಕು
ಸೌಕರ್ಯ ಮಿಗಿಲಕ್ಕು" ವೆಂಬ ನುಡಿಯು,
ರೈಲು ಪಯಣಿಗರಷ್ಟೆ ಸೀಮಿತಂ ಎನಬೇಡ
ನಿನ್ನ ಜೀವನಯಾತ್ರೆಗದುವೆ ಪಡಿಯು.

೯

ಪಾಪಪುಣ್ಯಗಳುಂಟು ಧರ್ಮಕರ್ಮಗಳುಂಟು
ಜಗದೊಡೆಯನುಂಟೆನಲುಮಿಲ್ಲ ಕೆಡುಕು ;
ಯಜಮಾನನಿಲ್ಲವೆಂದತಿಗಾಮಿಯಾದವಗೆ
ಜಗದೊಡಯನಿರೆ ಉಂಟು ತುಂಬ ತೊಡಕು.

೧೦

ಸಿಂಹದಿಂದೊಂದನುಂ ಬಕದಿಂದವೊಂದನುಂ
ಮೂರು ಗಾರ್ದಭದಿಂದಮೂರು ನಾಯಿಂ ;
ಕಾಗೆ-ಕೋಳಿಗಳಿಂದ ವ್ವೈದು-ನಾಲ್ಕೊಳ್ಗುಣವ
ಸಾದರದೆ ಕಲಿತ ನರ ಶೇಷಶಾಯಿ.

೧೧

ಹಿಡಿದ ಕೆಲಸವ ಬಿಡದೆ ಸಾಧಿಸುವ ಯತ್ನದಲಿ
ಹಿರಿದುಕಿರಿದೆಂದೆಣಿಸಲುಂಟು ತೊಡಕು
ಸರ್ವಪ್ರಯತ್ನದಿಂ ಸಾಧಿಸುವ ಸಿಂಹದೊಲು
ಹಿಡಿದುದಂ ಬಿಡದೆಸಗಲುಂಟು ಬದುಕು.

೧೨

ಇಂದ್ರಿಯಂಗಳನೆಲ್ಲ ನಿಗ್ರಹಿಸಿ ಸಂಯಮದೆ
ಸಾಹಸಿಗ ಸಾಧಿಸಂ ಗುರಿಯನಿರದೆ,
ಕಾಲದೇಶಗಳರಿದು ಸನ್ನಿವೇಶವಕಾಯ್ದು
ಬಂದ ಮೀನ್ಗಳ ಪಿಡಿವ ಬಕದ ತೆರದೆ.

೧೩

ವಿಶ್ರಾಂತಿಯಿಲ್ಲದೆಯೆ ಬಹುಭಾರಮಂ ಹೊರುವ
ಮಳೆಗಾಳಿ ಬಿಸಿಲುಗಳ ಪರಿವೆ ಮರೆದು,
ಅವಗಂ ಸಂತೋಷದಿಂ ಮಡಿವ ಸುಗುಣಗಳ
ಕತ್ತೆಯಿಂ ಕಲಿಗೆ ನರ ಬಿಂಕತೊರೆದು

೧೪

ಬಲ್ಪುಣಿಸು ಮಿತತುಷ್ಟಿ ಬಹುಜೇಗ ನಿದ್ರಿಪುದು
ಶೀಘ್ರಮೆಚ್ಚರ ಸಮಯಪಶೌರ್ಯ ವಿಧಿಯುಂ
ಸ್ವಾಮಿಭಕ್ತಿಯ ಬಗೆಗೆ ತನುವನರ್ಪಿಸುವಾರು
ಶುನಕನುತ್ತಮ ಗುಣವ ಕಲಿಗೆ ಮನುಜಂ

೧೫

ಗುಪ್ತದರ್ಶನಮೆಸಗಿ ಧೈರ್ಯದಿಂದೊಳಪೊಕ್ಕು
ಸಮಯವರಿದಾಲಯುವ ಜಾಣ್ಮೆಯಿಂದ,
ಎಚ್ಚರದೆ ಸೋಮಾರಿಯಾಗದಿಹ
ಗುಣವೈದ ನರ ಕಲಿಗೆ ಕಾಗೆಯಿಂದ,

೧೬

ಏಳುವುದು ಮುಂಜಾನೆ, ಹೋರಾಟ ಗೆಲ್ಲಕ್ಕೆ
ಬಂಧು ಬಳಗವ ಕೂಡಿ ಭುಂಜಿಸುವುದಂ,
ಕಾಮಿನಿಯ ಕಷ್ಟದಿಂ ಪಾರುಮಾಳ್ಪುದುಮೆಂಬ
ನಾಲ್ಕುಗುಣ ಕುಕ್ಕುಟದೆ ಕಲಿಗೆ ನರನು,

೧೭

ಭಾರಮೇಂ ಶಕ್ತನಿಗೆ ದೂರಮೇಂ ನಡೆಯುವಗೆ
ಪ್ರಾಜ್ಞನಿಗೆ ಪರದೇಶಮೆಂಬುದುಂಟೆ ?
ಆಗದವರಾರುಂಟು ಸಹೃದಯಶೀಲನಿಗೆ
ಹಿತಭಾಷಿಯಾದವನಿಗುಂಟೆ ವೈರಿ ?

೧೮

ಸಜ್ಜನರ ಹಾದಿಯಲಿ ನಡೆವುದತಿದುಸ್ತರಂ
ಎಂದದಂ ಬಿಡಬಹುದೆ ಜಾಣಮನುಜಂ,
ತನ್ನಳವಿಗನುಗುಣಂ ಹಾದಿಯೊಳಗಡಿಯಿಟ್ಟು
ಮುನ್ನಡೆವ ಧೀರನಿಗೆ ವಿಜಯ ಸಹಜಂ,

೧೯

ತನ್ನ ನಡತೆಯೊಳೆಷ್ಟು ಮೃಗನಡತೆಗನುಣಂ
ಮತ್ತೆಷ್ಟು ಸಜ್ಜನರ ನಡತೆಗೆಂದು,
ಪರಿಕಿಪೊಡೆ ದನ ದಿನಂ ಪರಿಶುದ್ಧನಹ ಮನುಜ
ನಡತೆಯೇ ಬೆಳಕಲ್ತೆ ಬದುಕಿಗೆಂದುಂ,

೨೦

ವಾಸಿಪುದು ಸಜ್ಜನರ ನೆರೆಯೊಳಗೆ ಮಾನವಂ
ಮಾಡುವುದು ಸಂಬಂಧ ಸುಜನರೊಡನೆ,
ಜಗಳಮೊ ಗೆಳಮೆಯೊ ಸುಜನರೊಡನಿರಲಕ್ಕು
ಸುಳಿಯದಿರು ಕನಸಿನೊಳು ದನುಜರೊಡನೆ.

೨೧

ದ್ವೇಷಿಸದೆ ದೂಷಿಸದೆ ಯಾರನುಂ ಯಾಚಿಸದೆ
ಪರನಿಂದೆ ಗೆಡೆಗೊಡದೆ ಧೃತಿಯಕೆಡದೆ !
ಕರೆಪುದಿರೆ ಬಾರದಿಹ ಮಾನವಂ ಶಿಲೆಯುಂತೆ
ಕೈಗೊಳುವ ಪೂಜೆಯುಂ ತೃಣವ ಕೊಡದೆ.

೨೨

ಮೂರ್ಖತ್ವ ತೊಲಗುವುದು ಸದ್ಗ್ರಂಥಪಠನದಿಂ
ಜಪದಿಂದ ಪಾತಕಂ ಕಳೆವು ದಿಳೆಯೊಳ್,
ಮಿತಭಾಷಿಗುಂಟೇನು ಮಾತುಕತೆಯೊಳು ಜಗಳ
ಭಯಮಿಲ್ಲಮೆಚ್ಚರಿತ್ತ ಮನುಜಗೆಂದುಂ

೨೩

ವಯಸು ಗತಮಾದೊಡಂ ಸುವಿವೇಕಿ ವಿದ್ಯೆಯಂ
ಎಂತಾದರುಂ ಗಳಿಪನಾತ್ಮವಿದರಿಂ,
ಇಹ ಜನ್ಮದೊಳಗದರ ಫಲ ದೊರೆಯದಿರ್ದೊಡಂ
ನೂರು ಜನ್ಮದೊಳು ಸುಲಭಮಕ್ಕುಮುನರಿಂ,

೨೪

ಗಾಢಮಾಲೋಚಿಸಿದ ವ್ಯರ್ಥಂಪತ್ನವೆಸಗಿರ್ಪ
ತಿಳಿಪರೊಳು ಸುವಿಚಾರವೆಸಗಿ ಬಿಡದೆ,
ಜಾಣರಾರಂಭಿಸಿದ ಸತ್ಕಾರ್ಯಮಾವಗುಂ
ಹುಸಿಯದೆಂಯಿ ಹಸನಹುದು ಹದವು ಕೆಡದೆ.

೨೫

ಅಲಸರುಂ ವಂಚಕರು ಮೈಗಳ್ಳರಾದವರ್
ಲೋಗರಪವಾದಕ್ಕೆ ಹೆದರದವರು,
ಸಂದೇಹವಾದಿಗಳು ಕಾರ್ಯಸಿದ್ಧಿಯ ಬಗೆಗೆ
ಕಾರ್ಯಾಂತಮೆಂದಿಗುಂ ಪಡೆಯರವರು

೨೬

ಜಲಬೇಕು ತನಗೆಂದು ಕಡಲಾರ ಬೇಡಿತ್ತು?
ನದಿಪೂರದಿಂ ಕಡಲು ತುಂಬಿ ಬರ್ಕುಂ,
ಪಾತ್ರತೆಯ ಮಾತ್ರಮೇ ಮನುಜಗಳಿಸಿದೊಡಾಯ್ತು
ಪಾತ್ರದೊಳು ಸಂಪತ್ತು ತಾನೆ ಬರ್ಕುಂ.

೨೭

ಅಜ್ಞಾನದಿಂ ಕೆಲರುಮವಿವೇಕದಿಂ ಕೆಲರು
ಕೆಲಸಕ್ಕೆ ಕೈಹಾಕಿ ಬಿಡುವರೊಡನೆ,
ಕೆಲರಹಂಕಾರದಿಂ ತಾವಾಗಿ ಕೆಡುತಿಹರ್
ದುಷ್ಟಸಂಗದಿ ಮತ್ತೆ ಕೆಲರು ಕೆಡುವರ್

೨೮

ಗೆಳೆಯರಂ ತನ್ನವರ ಬಂಧುಗಳ ಬುದ್ಧಿಯಂ
ತನ್ನ ಧೈರ್ಯೋತ್ಸಾಹ ಮಿತಿಯನೆಲ್ಲಂ,
ಆಪತ್ತಿನೊರೆಗಲ್ಲಮೇಲ್ತಿಕ್ಕಿ ನಿರ್ಧರಿಪ
ಸ್ಥಾನವಂ ಸುವಿಚಾರಿಗೆಸಿಸಿ ಮೆರೆಪ್ಪಂ

೨೯

ಮುಂಬರುವ ವಿಪದಗಳ ಮೊದಲೆ ಯೋಚಿಸಿಯವಕೆ
ಸೂಕ್ತಪರಿಹಾರಮಂ ರಚಿಪ ವಿಬುಧಂ
ಮನೆಗೆ ಬೆಂಕಿಯು ಹೊತ್ತಿ ಧಗಧಗಿಸಿ ಉರಿಯುತಿರೆ
ಬಾವಿ ತೋಡುವ ಕೆಲಸಕಿಳಿಯನೆಂದುಂ

೩೦

ಅನ್ಯಾಯದಿಂ ಗಳಿಸಿದರ್ಥವೈಭವಕಿಂತ
ಬಡತನವೆ ಬಹುಲೇಸು ಸಾಧುಜನಕೆ,
ಬೇನೆಯಿಂದೂದಿರುವ ಬೊಜ್ಜು ದೇಹಕ್ಕಿಂತ
ನೀರೋಗಕೃಶತೆಯೇ ಹಿತವು ಮನಕೆ.

೩೧

ಅತಿದಾನದಿಂ ಬಲಿಗೆ ಬಂಧನಂ ತಾನಾಯ್ತು
ಮಾನಧನ ಮಡಿದನಾದುರ್ಯೋಧನಂ,
ಅತಿ ಚಪಲನೆನಿಸಿರ್ದ ರಾವಣಂ ಹಾಳಾದ
ಅತಿಯೆ ದುರ್ಗತಿಗೆಲ್ಲ ಬಲ್ಸಾಧನಂ

೩೨

ಯುಕ್ತಿಯುಕ್ತಮುಮೆನಿಪ ಮಾತನಾಕರ್ಣಿಪುದು
ಮಗುವಿನಿಂದಾದೊಡಂ ಮರೆಮಾಜದೆ,
ರವಿಗೆ ಕಾಣದ ವಸ್ತು ದೀಪದಿಂ ಕಾಣ್ಬುದೆನೆ
ತಿಳಿವಾರದಾದೊಡಂ ಪಡೆಯೊ ಬಿಡದೆ !

೩೩

ನಿಷ್ಫಲಂ ಕಡಲಿನಲಿ ಮಳೆಸುರಿವುದಾವಗಂ
ನಿಷ್ಫಲಂ ತಣಿದವಗೆ ರಸಭೋಜನಂ,
ನಿಷ್ಫಲಂ ಧನಿಕನಿಗೆ ಕೊಡುವ ದಾನಗಳೆಲ್ಲ
ನಿಷ್ಫಲಂ ಪಗಲಿನೊಳು ದೀಪೋತ್ಸವಂ,

೩೪

ಬಿಡಬೇಕು ಜೀವಿಕೆಯು ದೊರೆಯದಿಹ ದೇಶಮಂ
ಬಿಡಬೇಕು ಕಿರುಕುಳದ ಜೀವನಮುಮಂ,
ಬಿಡಬೇಕು ಮಾಯಾವಿ ಗೆಳೆಯನಂ ತಳುವದೆಯೆ
ಬಿಡಬೇಕು ಧನಮುಮಂ ಜೀವಹರನಂ.

೩೫

ನಡೆಯಬಾರದು ಮುಂದೆ ನಾಯಕಂ ತಾನಾಗಿ
ಕಾರ್ಯಸಿದ್ಧಿಸಲೆಲ್ಲ ದೊಲವು ಸಿದ್ಧ ;
ಅಡಿಯಮುಂದಿಡೆ ಸಗ್ಗ ಹಿಂಜರಿಯಲದೆ ನರಕ
ತನ್ನಳಿವ ಲೆಕ್ಕಿಸದೆ ನುಗ್ಗು ಮುಂದೆ !

೩೬

ಸಾಲಗುಡುವಾಢ್ಯನುಂ ಸಜ್ಜನರ ಗೋಷ್ಠಿಯುಂ
ಹಿರಿಯಜನ ಹರಿವನದಿ ವೈದ್ಯರೈವರ್
ಇರದೂರಿನೊಳಗೊಂದು ಅರೆಗಳಿಗೆಯಿರಬೇಡ
ವೆಂದೆಮ್ಮ ಹಿರಿಯರುರೆ ಬೋಧೆಗೈವರ್

೩೭

ಯಜಮಾನನಿರದೆಡೆಯು ವಾಸಯೋಗ್ಯಮುಮಲ್ತು
ಬಹುನಾಯಕತ್ವದೊಳಗಿರುವುದೆಂತು ?
ಮೂರ್ಖ ನಾಯಕನಾಗಲೇನೇನು ವಿಪದಗಳೊ
ಬಾಲಿಶಂ ಮುಂದಿರಲು ಬಾಳ್ವುದೆಂತು ?

೩೮

ನಾಳೆ ಯಾರಾರಿಗೇಮೇನೇನು ಬರ್ಪುದೆಂ
ದೀರಾರು ಭುವನದೊಳಗರಿವರಾರ್ಕೆ !
ಅದರಿಂದ ಜಾಣನುರೆ ನಾಳೆಬಪ್ಪುದನೆಲ್ಲ
ನಿಂದೆಸಗಿ ಮುಗಿಸುವಂ ಖ್ಯಾತಿಯೊಳಗೆ

೩೯

ಪರರಿಗಾಗಿಯೆ ಕರ್ಮಕೌಶಲಂ ಲೋಕದಲಿ
ಪರರಿಗುಪಕರಿಸುವುದೆ ಪರಮಧರ್ಮಂ
ಸತ್ಪಾತ್ರದೊಳಗೀವ ದಾನಮೋ ಲೇಸಕ್ಕು
ಆಸೆತೊರೆವುದೆ ನರಗೆ ಪರಮಧರ್ಮಂ

೪೦

ಗ್ರಂಥ ಕೋಟಿಯೊಳೊರೆದ ನೀತಿಜಾತಮನೆಲ್ಲ
ಶ್ಲೋಕಾರ್ಧದೊಳೆ ಪೇಳ್ವೆ ಕೇಳಿ ಮೆಲ್ಲಂ,
ಮೈ-ಮಾತು-ಮಾನಸದೆ ಪೆರರಿಗೊಳಿತೆಸಗುವುದೆ
ಪುಣ್ಯ ಮುಳಿದುದು ಮತ್ತೆ ಪಾಪಮೆಲ್ಲಂ,

೪೧

ಮಿತವಾಗಿ ಬಳಸಿದರು ಮುಗಿವುದಂಜನಗಿರಿಯು
ಕಣಕಣಂ ಸೇರಿಸಲು ಪುತ್ತಮಕ್ಕುಂ,
ದಿನವ ಬಂಜೆಯಗೊಳಿಸದಾವಗುಂ ಸತ್ಕರ್ಮ-
ದಾನಮಧ್ಯಯನದಿಂ ಸಾರ್ಥಗೊಳಿಸೈ !

೪೨

ಭೂತಾನುಕಂಪೆಯುಂ, ಗೆಳೆತನಂ, ದೀನರಲಿ
ದಾನಮುಂ, ಮೃದು ಮಧುರಮಾದ ನುಡಿಯು,
ಇವನುಳಿದು ಲೋಕಮಂ ವಶಪಡಿಸಲೇನುಂಟು
ಗಳಿಸಿದವನಿವ ಜಾಣನೆನಿಪನಿಳೆಯೊಳ್.

೪೩

ಯಾರ ಮನೆಯೊಳು ದೋಷವಿಲ್ಲವಿಲ್ಲಿಯತನಕ
ರೋಗ ಪೀಡಿತರಾಗದವರು ಯಾರು ?
ವ್ಯಸನಪಡದವರಾರುಮೇನಾನು ಮೊಂದರಿಂ
ಆವಗುಂ ಸುಖಿಯೆನಿಸಿದವರು ಯಾರು?

೪೪

ಜಗಳ, ಲೇವಾದೇವಿ, ಕಂಡುದಂ ಕೊಳ್ಳುವುದು,
ಏಕಾಂತಭಾಷಣಂ ಪರಸತಿಯರೊಳ್,
ಬೇಡುವುದುಮೆಮರಿನೊಳಗಾವಗುಂ ನಿಲ್ವಗುಣ
ಕೆಡಿಸುವವು ಕೆಳೆತನವನಾತ್ಮವಿವರೊಳ್

೪೫

ಎಲ್ಲಿ ಗೆಳೆತನ ಬೆಳೆಸಲೆಳಸುವೆಯೊ ನೀನಲ್ಲಿ
ತ್ಯಜಿಸಿವನು ಮೂರನುಂ ಸತ್ಯವಾಗಿ
ಪತಿಯೆಮರಿಗಿರವಲ್ಲಿ ಪೆಂಡಿರೊಳು ಮಾತುಕತೆ
ಜಗಳ, ಲೇವಾದೇವಿ ಮುಖ್ಯವಾಗಿ.

೪೬

ಯಾರೊಳಗೆ ಧನ ಧಾನ್ಯ ಸಮಮೆನಿಸಿ ಮೆರೆದಪುದು
ಮಾರೊಳಗೆ ಕುಲಸೆರ್ಮೆ ಸಮನಿಸುವುದು,
ಮದುವೆ-ಮೈತ್ರಿಗಳೆರಡುಮವರೊಳೇ ಕೂಡುವುವು
ಬಡವ-ಬಲ್ಲಿದರೊಳಗೆ ಕೂಡವೆಂದುಂ.

೪೭

ತನ್ನ ಶಕ್ತಿಯನಿರದೆ ಬೆಳಗುವನೆ ಉತ್ತಮನು
ತಂದೆಯಿಂ ಬೆಳಗುವವ ಮಧ್ಯನೆನಿಕುಂ,
ಮಾವನಿಂ ಬೆಳಗುವವನಧಮನುಂ ಲೋಕದಲಿ
ಪೆಣ್ಣಿನಿಂ ಬೆಳಗುವವನಧಮಾಧಮಂ

೪೮

ದಾನಕ್ಕೆ ಸಂಪತ್ತು ಪುಣ್ಯಕ್ಕೆ ಸದ್ವಿದ್ಯೆ
ನಿಶ್ಚಯಕೆ ಪರಬೊಮ್ಮಪಾರ ನುಡಿಯು,
ಪರರಿಗುಪಕರಿಸುವುದೊ ಧನ್ಯನವ ಲೋಕದಲಿ
ಪುಣ್ಯನವ ಮೂಲೋಕ ತಿಲಕನವನು,

೪೯

ದುರ್ಜನರ ಬಾಯಿಂದ ಬರುವ ದುರ್ವಾದಮೇ
ಸಜ್ಜನರ ಮುಖದಿಂದೆ ಹಿತಮೆನಿಸುಗುಂ,
ಹಸಿಯ ಸೌದೆಯ ಹೊಗೆಯುಮಹಿತಮಾಗಿರ್ದೊಡಂ
ಅಗರು ಚಂದನ ಧೂಮ ಧೂಪಮೆನಿಕುಂ

೫೦

ಲೋಭಿಯನೆ ಲೋಕದಲಿ ದಾತನೆಂದೆನಲಕ್ಕು
ಗಳಿಸಿಟ್ಟ ಧನಮೆಲ್ಲ ಬಿಟ್ಟನಡೆವಂ
ದಾತನನೆ ಕೃಪಣನೆಂದೆನಲಕ್ಕು ನಿಕ್ಕುವಂ
ಗಳಿಸಿರ್ದ ಸುಕೃತಮಂ ಕೊಂಡೆ ನಡೆವಂ

೫೧

ಉಣಬೇಕು, ಕೊಡಬೇಕು, ಬದುಕಿನೊಳು ವೈಭವಂ,
ಸಂಗ್ರಹವನೆಂದಿಗುಂ ಮಾಳ್ಪುದಲ್ತು
ಗೂಡಿನಲಿ ಮುಂಬಿಗಳು ಕೂಡಿಟ್ಟ ತನಿಜೇನು
ಪೆರರ ಪಾಲೆಂಬುದಂ ಕಂಡೆವಲ್ತೆ !

೫೨

ಸತ್ಪಾತ್ರದೊಳು ಗೈದ ದಾನವಣುವಾದೊಡಂ
ಬೆಳಗುವುದು ಬಹುವಪೌಲ್ಯಮೆನಿಸಿ ಧರೆಯೊಳ್
ಶುಕ್ತಿಯಲಿ ಬಿದ್ದೊಂದು ಜಲಬಿಂದುವುಂ ಮುತ್ತೆ
ಮುತ್ತಾಗಿ ತೊಳಗುವುದು ಸುಕೃತಿ ಶಿರದೊಳ್.

೫೩

ಕಷ್ಟ ಸಲಿಲದಿ ಮುಳುಗಿ ನೊಂದರುಂ ಸಜ್ಜನರು
ಉಪಕಾರಮನೆ ಗೈವರೆಂತಾದರುಂ,
ರಾಹುವಿನ ಬಾಯಲ್ಲಿ ಸಿಲುಕಿರ್ದರುಂ ಶಶಿಯು
ತಣ್ಣನೀವಂ ಜಗಕಮಿನಿತಾದರುಂ,

೫೪

ಬೆಳದಿಂಗಳಿಂ ಜಗವ ಬೆಳಗಿದರು ಚಂದ್ರಮಂ
ತನ್ನೊಳಿಹ ಕಲಮೆಯನೆ ತೊಳೆಯನೆಂತು ?
ಪರಹಿತದೆ ನಿರತರಹ ಸುಜನರಿಗೆ ನಿಜಹಿತವು
ಮರೆವುದೈ ಲೋಕದಲಿ ಸಾಜಮಿಂತು,

೫೫

ಉಪಕಾರ ಮಾಡುವುದು ಲೋಕಹಿತ ಬಯಸುವುದು
ನಿಷ್ಕಪಟ ಮೈತ್ರಿಯಂ ಮಾಳ್ಪುದೆಲ್ಲಂ,
ಸುಜನರಿಗೆ ಸಹಜಗುಣಮಾದವುದು ಲೋಕದಲಿ
ತಣ್ಪು ತುಂಬಿದರಾರು ಚಂದ್ರನಲ್ಲಿ ?

೫೬

ಮಾನ್ಯರಿಗೆ ಮನ್ನಣೆಯ ಮಾನ್ಯರೇ ಕೊಡುತಿಹರು
ಸಾಮಾನ್ಯರವರ ಗುಣವರಿಯರೆಂದುಂ,
ಧರಿಸಿದಂ ಚಂದ್ರಮನ ಪರಶಿವಂ ಮಂಡೆಯಲಿ
ನುಂಗಲೆಳಸುವನವನ ರಾಹುವಿಂದುಂ.

೫೭

ಸಿರಿ ಬರಲು ಹಿಗ್ಗದೆಯೆ ಬೆಸನ ಬರೆ ತಗ್ಗದೆಯೆ
ಅಸುವಿನಿಂದಾದರುಂ ಹಿತವೆಸಗುವರ್,
ತನ್ನ ಬಣ್ಣಿಸೆ ನಾಣು ಹೆರರ ಬಣ್ಣಿಸೆ ಜಾಣ
ರಾದವರ್ ಲೋಕದೊಳಗೆನಿತು ದೊರೆವರ್

೫೮

ಧನಮುದಂ ತಾಗುವುದೆ ದಯೆ ಯುಳ್ಳಮನುಜನಿಗೆ
ಉಪಕಾರಿ ಹರ್ಷಿಸನೆ ಬೇಡಿದೊಡನೆ!
ಹಿರಿಯ ಬೋಗದಿ ನರಳಿಯುಸುವಳಿಯೆ ಕಡುಲೋಭಿ
ಭಾರವಿಳಿಯಿತು ಎಂದು ಧರೆಯುಸಿರ್ದು ನಲಿಗುಂ,

೪೯

ಗುಡುಗಿದರು ಶರದದಲಿ ವರ್ಷಿಸವು ಮೋಡಗಳು
ಗುಡುಗದೆಯೆ ವರ್ಷಿಪವು ವರ್ಷದಲ್ಲಿ,
ನುಡಿದಂತೆ ನಡೆಯರೀ ನೀಚರೀ ಲೋಕದಲಿ
ನುಡಿಯದೆಯೆ ನಡೆಯುವಂ ಸಾಧುಚರಿತಂ.

೫೦

ಗುಣಹೀನರಾಗಿರ್ಪ ಜೀವರಲಿ ಮಮತೆಯುಂ
ಕರುಣೆಯುಂ ತೋರುವಂ ಸಾಧುಚರಿತಂ
ಚಾರುಕರ ಚಂದಿರಂ ದುರ್ಜನರ ಮಂದಿರವ
ಮೇಲೆ ತಿಂಗಳ ಸೂಡಿ ನಲಿಪ ನಿರುತಂ

೫೧

ಸದ್ವಂಶದೊಳಗುದಿಸಿ ತನ್ನತನು ಬಳಲಿಸುತೆ
ಪರತಾಪ ಹರಿಪ ಬೀಸಣಿಗೆಯಂತು,
ಸದ್ವಂಶ ಸಂಭವಂ ಸತ್ಪುರುಷನಾವಗಂ
ಪರತಾಪ ಪರಿಹರಿಸೆ ದುಡಿವನೆಂದುಂ

೫೨

ಎಳೆತನದೆ ಕುಡಿದಲ್ಪ ಜಲವ ತಾಂ ಮರೆಯದಲೆ
ಶಿರಸಿನಲಿ ಧರಿಸಿದೀ ತೆಂಗುವಿಂದುಂ,
ಮಧುರತರದೆಳೆನೀರ ಕಡೆತನಕ ಕೊಡುವುದೆನೆ
ಮರೆಯನುಪಕಾರಮಂ ಸುಜನನೆಂದುಂ.

೫೩

ಪರರೆಸಗಿದುಪಕೃತಿಯ ನೆನೆದುಮುಪಕರಿಸುವರು
ಬಹುಮಂದಿ ದೊರೆಯುವರು ಜಗದೊಳೆಂದುಂ ;
ಸ್ವಾರ್ಥಮಿನಿತಾದರುಂ ಬಯಸದೆಯೆ ಸಂತತಂ
ಪರಕೃತ್ಯನಿರತರೆನೆ ವಿರಳಮಿಂದುಂ

೬೪

ಸ್ವಪ್ರಯೋಜನಮಿಲ್ಲ ಕೀರ್ತಿಯಾಸೆಯುಮಿಲ್ಲ
ಸುಖಮಿಲ್ಲ, ದುಃಖಮೊ ಬಹಳಮಿವರೊಳ್,
ಆದರುಂ ಧೀರರುರೆ ಪರಸೇವೆಯೆಸಗುವುದೆ
ಧರ್ಮಮೆಂದನವರತ ಮಹಿಮರಿಳೆಯೊಳ್

೬೫

ಅಪಕಾರಿಯಾದವಗಮುಪಕಾರಮೆಸಗುವನ
ಸಾಧುವೆಂದೊರೆಯುವರು ಸುಜನರಿಳೆಯೊಳ್,
ಉಪಕಾರಿಯಾದವಗಮುಪಕಾರಮೆಸಗುವನ
ಸಾಧುವೆನಲಾವ ಗುಣ ಕಾಣ್ಬುದವನೊಳ್

೬೬

ಮೊದಲಲ್ಲಿ ಮಧ್ಯದಲ್ಲಿ ಕಡೆಯೊಳಗಮಾವಗಂ
ಸಜ್ಜನಂ ಬದಲಿಸನು ತನ್ನಕೆಳೆಯುಂ,
ಕಾಯಿಸುತೆ ಕತ್ತರಿಸಿ ತಿಕ್ಕಿಬಡಿದರು ಮತ್ತೆ
ಕಾಂಚನಂ ಬದಲಿಪುದೆ ತನ್ನಗುಣಮಂ !

೬೭

ದೂರದೊಳಗಿರ್ದರುಂ ಗುಣವಂತ ಸನ್ಮಿತ್ರ
ಕೊರತೆಯಾಗದು ಗೆಳೆಮೆಗೆಂದುಮಿಳೆಯೊಳ್,
ಕಾರ್ಮುಗಿಲಿನೊತ್ತಡದೆ ಕವಿದಿರ್ದರುಂ ಚಂದ್ರ
ನರಳಿಸನೆ ಕುಮುದಗಳ ಕೊಳದ ಜಲದೊಳ್ !

೬೮

ನೆಲಕೆ ಗಡಿ ಕಡಲೆನಲು ಹನುಮನದ ದಾಂಟಿದಂ
ಗಗನವಡಗಿತು ಬೊಮ್ಮಪೊಕ್ಕುಳಲ್ಲಿ,
ಎಲ್ಲೆಯೊಂದುಂಟಲ್ಲ ಲೋಕಗಳಿಗಾವಗಂ
ಸುಜನ ತಿಳುವಿಂಗಿಲ್ಲವೆಲ್ಲೆ ಇಲ್ಲಿ.

೬೯

ಕ್ಷಯಯುತಂ ವಕ್ರತನು ಜಡನು ದೋಷಾಕರನು
ಮಿತ್ರನಳಿವಂ ಚಂದ್ರನೆಂದು ಗಣಿಸಂ,
ಆದರುಂ ಶಿವನವನ ಮುಡಿಯಲಿ ತಾಳ್ದಪಂ
ಹಿರಿಯರಾಶ್ರಿತರಲ್ಲಿ ಕೀಳನೆಣಿಸರ್,

೭೦

ಉದಯದಲಿ ರವಿ ತಾನು ರಕ್ತತನುವಾಂತಪಂ
ರವಿಯಸ್ತಮಿಸುವಲ್ಲಿ ರಕ್ತನೆಂದುಂ,
ಸಿರಿ ಬರಲಿ ಬರ ಬರಲಿ ಗರ ಶಿರವೊಳೆರಗಿರಲಿ
ಬದಲಿಸರು ಸಜ್ಜನರು ಗುಣಮನೆಂದುಂ.

೭೧

ಬುವಿಯೆಲ್ಲ ಬೇವುಮರ ಸಿರಿಗಂಧಮಪರೂಪ
ರತ್ನ ದುರ್ಲಭ ಕಲ್ಲು ತುಂಬಿದೆಡೆಯೊಳ್,
ಕಾಗೆ ಕೂಗಾವಗಂ, ಪಿಕಸರಂ ಚೈತ್ರದಲಿ
ವಿರಳಸುಜನರ್ ಖಲರು ತುಂಬಿದಿಳೆಯೊಳ್.

೭೨

ತುದಿಯಿಂದ ಬುಡವರೆಗೆ ಕರ್ವುಗೆಣ್ಗೆಣ್ಣಿಗುಂ
ಮಧುರತರ ಮೆನಿಸುವೊಲು ಸನ್ಮಿತ್ರರ,
ಸಹವಾಸ ದಿನದಿನಂ ಮಧುರತರಮೆನಲದಕೆ
ವಿಪರೀತ ಗೆಳೆತನಂ ದುಷ್ಟಜನರ.

೭೩.

ನದಿ ತಾನು ಕುಡಿಯುವುದೆ ತನ್ನೊಳಿಹ ತಿಳಿನೀರ
ಮರ ತನ್ನ ಪಣ್ಗಳಂ ಸವಿಯದಲ್ತೆ !
ಮಳೆಗರೆದ ಮೋಡಗಳು ಬೆಳೆದ ಬೆಳೆ ಮೆಲ್ಲುವವೆ
ಸುಜನಸಂಪದಮೆಲ್ಲ ಪೆರರಿಗಲ್ತೆ !

೭೪

ಮೂಢರಾರಂಭಿಸುವ ಕೃತಿಯಲ್ಪವಾದರುಂ
ಆಡಂಬರವೆ ಮಿಗಿಲು ಕಡೆಯತನಕ,
ನುರಿತವರ್ ಹಿರಿದೆಸಕ ಕೈಗೊಳುವರಾದರುಂ
ನಿಶ್ಚಿತರ್ ಫಲಕ್ಕೆಗೆ ಬರುವತನಕ.

೭೫

ಸುಜನ ಮುಖದಲಿ ಬರುವ ದೋಷಮೇ ಗುಣಮಕ್ಕು
ದುರ್ಜನರ ಮುಖದಿ ಗುಣದೋಷಮೆನಿಕುಂ,
ಉಪ್ಪನೀರಂ ಪೀರ್ದ ಮುಗಿಲ ನೀರ್ ಸಿಹಿಯಕ್ಕು
ಫಣಿಕುಡಿದ ಪಾಲ್ ಗರಳತಾನೆನಿಸುಗುಂ

೭೬

ಮಹಿತರಿಗೆ ಲೋಕದಲಿ ಸಂಪದಗಳೊದಗುವವು
ವಿಪದಂಗಳುಂ ಕವಿವುವವರನೆಂದುಂ,
ವರ್ಧಿಪುದು ಕುಗ್ಗುವುದು ಚಂದ್ರಮಗೆ ಮಾತ್ರಮೇ
ಕಿರುತಾರೆ ಗಾವುದುಂ ಲಭಿಸದೆಂದುಂ.

೭೭

ತವರು ಹಿರಿಮೆಯಿನೇನು ತಂದೆ ಗೌರವಮೇನು
ನಿಜಶಕ್ತಿಯಿಂ ಪುರುಷಮೆರೆಯಲಕ್ಕುಂ,
ಗಡಿಗೆಯೆನಿತಾದರುಂ ಕೂಪಮೊಣಗಿಸಲಳವೆ
ಕಲಶಜಂ ಕಡಲನೇ ಕುಡಿದನಕ್ಕುಂ

೭೮

ಅಭಿಷೇಕಮೆಸಗಿಲ್ಲ ಸಂಸ್ಕಾರಮಿನಿತಿಲ್ಲ
ಕಪ್ಪಕಾಣಿಕೆತಂದು ಮಣಿವರಿಲ್ಲ,
ಶೌರ್ಯದಿಂ ಗಳಿಸಿರ್ಪ ರಾಜ್ಯವೈಭವದಿಂದ
ಮೃಗರಾಜನಾದುದೀ ಸಿಂಹವಿಲ್ಲಿ.

೭೯

ಸತ್ಪಾತ್ರದೊಳು ಗೈದ ವೆಚ್ಚದಿಂ ಸುಜನರಿಗೆ
ವಿಪದಮುಂ ಶೋಭಿಸುವುದೆಂದೊರೆಯುವರ್,
ಗುಡ್ಡದಲಿ ಗೂರಾಡಿ ಘೀಂಕರಿಪ ಮದಗಜಕೆ
ಪಲ್ಮುರಿದರುಂ ಶ್ಲಾಘ್ಯವೆಂಬರರಿದರ್

೮೦

ಸಂಪದಕೆ ಸೌಜನ್ಯ ಮಿತವಚನ ಶೌರ್ಯಕ್ಕೆ
ಶಾಂತಿ ತಿಳಿವಿಗೆ ವಿನಯ ಸತ್ಕುಲಕ್ಕೆ
ವ್ಯಯವು ಸತ್ಪಾತ್ರದಲಿ ನಿಷ್ಕೋಪ ತಪಸಿಂಗೆ
ಶೀಲವೇ ಭೂಷಣಂ ಮಿಕ್ಕೆಲ್ಲಕೆ.

೮೧

ದುರ್ಜನರು ಸುಜನರುಂ ಸೂಚಿಯಿರ್ಕಡೆಗಳನು
ಸರಿಯಾಗಿಹೋಲುವರು ಲೋಕದಲ್ಲಿ
ಸೂಚಿಮುಂಭಾಗದೊಲು ಖಲನು ರಂಧ್ರವಕೊರೆಯೆ
ಗುಣವಂತ ಮುಚ್ಚುವಂ ಹಿಂದಿನಿಂದೆ.

೮೨

ಸ್ವಜನರಲಿ ದಾಕ್ಷಿಣ್ಯ ಪರಿಜನದೆ ಕನಿಕರಂ
ಶಾಠ್ಯದುರ್ಜನರಲ್ಲಿ ನಯವು ಬುಧರೊಳ್,
ಸರಳತೆಯು ತಿಳಿದರೊಳು ಗೌರವಂ ಗುರುಜನದೆ
ಪೆಣ್ಗಳೊಳು ಶಾಲೀನ ಜಾಣನೆನಿಪಂ

೮೩

ಪೆಣ್ಜಿಂಕೆ ಕಣ್ಣುಗಳಿಗಂಜನವ ತಿದ್ದಿದರ್
ನವಿಲ ರೆಕ್ಕೆಗೆ ಸೊಬಗಗೊಳಿಪರಾರು ?
ನೈದಿಲೆಯ ದಳಗಳಲಿ ಹೊಂದಿಕೆಯ ಗೈದವರ್
ಸುಜನರಿಗೆ ವಿನಯಮಂ ಕಲಿಪರಾರು ?

೮೪

ನೀಚಕೇಸಂಗ್ಸೈಯರೆಡರುಗಳ ಭಯದಿಂದ
ಎಡರು ಬರೆ ವಿರಮಿಸರು ಮಧ್ಯಕೆಸಿಸರ್
ಎಡೆಬಿಡದೆ ಎಡರುಗಳು ಎದುರಾದರುಂ ಬಿಡದೆ
ಹಿಡಿದುದಂ ಸಾಧಿಸುವರುತ್ತಮಾಂಕರ್

೮೫

ತೇದರೇಂ ಪೆರ್ಚದೇ ಚಂದನದ ಸೌರಭ್ಯ
ಚಚ್ಚಿದರೆ ಕಬ್ಬು ತಾಂ ರುಚಿಗೆಡುವ್ರದೇ?
ಕಾಯ್ಸಿನಿಂ ಕಾಂಚನಂ ಬಣ್ಣಮಂ ಬದಲಿಪುದೆ
ಕಷ್ಟಬರೆ ಧೀರನೇಂ ಧೃತಿಗೆಡುವನೆ?

೮೬

ದುರ್ಜನರ ನುಡಿಕೆಂಡದಿಂ ದಗ್ಧರಾದರುಂ
ಸಜ್ಜನರು ವಿಪ್ರಿಯದ ನುಡಿಯರೆಂದುಂ,
ಆಗಲು ಚಕ್ಕಿಯ ಚೆಂಕಿ ಸುಟ್ಟರುಂ ಅದು ತನ್ನ
ಶ್ರೀಗಂಧಸೌರಭದ ಬಿಡದೆಂದಿಗುಂ

೮೭

ಸಜ್ಜನರ ಸಂಗದಿಂ ಖಲನು ಸಜ್ಜನನೆನಿಪ
ಖಲಸಂಗದಿಂ ಸುಜನ ಕೆಡನೆಂದಿಗುಂ,
ಪೃತ್‌ಕುಸುಮ ಸೌರಭವನಾಂತಪುದು ಲೋಕದಲಿ
ಮೃದ್ಗಂಧಮಂ ಕುಸುಮಧರಿಸದೆಂದುಂ

೮೮

ಬಡವ ಕೆಡು ನುಡಿಗಳಿಗೆ, ಧನಿಕಹಿತವಚನಕ್ಕೆ
ನಿಜಸತಿಯೊಳೇ ತೃಪ್ತರಾದಮನುಜರ್,
ಪರದೂಷಣೆಗೆ ವಿಮುಖರಾದರುಂ ಲೋಕದಲಿ
ವಸುಧೆಭೂಷಣರವರೆ ವಿಮಲಚರಿತರ್.

೮೯

ಸೌಜನ್ಯ ದೌರ್ಜನ್ಯ ಹುಟ್ಟಿಸಿಂದಲೆ ಬರ್ಕು
ಬಾರವವು ಸಂಗದಿಂ ಮನುಜಗೆಂದುಂ ;
ಹುಟ್ಟಿಸಿಂ ಜೊತೆಗಿರ್ಪ ಮಣಿ, ನಾಗದೋಷಮಂ;
ನಾಗ, ಮಣಿಗುಣಮುಮಂ ಪಡೆಯುಪೆಂದುಂ.

೯೦

ಮೃಗಮಾಂಸ ಭುಂಜಿಸುವ ಸಿಂಹಗಳು ಕಾಡಿನಲಿ
ಹುಲ್ಲನೇಂ ಮೆಲ್ಲುವವೆ ಹಸಿವಾದರುಂ,
ಬಹುಸಂಕಟಂಗಳಿಂ ನೊಂದರೇಂ ಸಜ್ಜನರು
ಹೀನಕೃತಿಗೆಳಸುವರೆ ಬಡವಾದರುಂ.

೯೧

ಕಾಂತೆಯರ ಕಡೆಗಣ್ಣ ಬಾಣಕ್ಕೆ ಸಿಲುಕದೆಯೆ
ಕೋಪಾಗ್ನಿಯಿಂ ಸುಡದ ವಿಜಿತೇಂದ್ರಿಯರ್
ವಿಷಯಗಳ ಪಾಶಕ್ಕೆ ಬಲಿಯಾಗದವರಿಲ್ಲ
ಮೂಲೋಕ ವಿಜಯಿಗಳು ಧೀರಮನುಜರ್

೬೨

ರಾಹುಮುಖದಲ್ಲಿರ್ಪ ರವಿ ತನ್ನ ನಂಬಿರುವ
ಕಮಲಗಳ ನರಳಿಸಂ ಶ್ರದ್ಧೆಯಿಂದ,
ಸಜ್ಜನರು ಕಷ್ಟದಲಿ ಪರಿತಪಿಸುತಿರ್ದೊಡಂ
ಹಿಡಿದೆಸಕಮುಗಿಸುವರು ತಾಳ್ಮೆಯಿಂದ

೯೩

ಕೊಡುವವಂ ಕೊಡಿಸುವನೆ, ಕೊಡಿಸುವಂ ಕೊಡ ಮತ್ತೆ
ಕೊಡು-ಕೊಡಿಪಡೊಳಗಿಲ್ಲ ಹಿತವಚನವು.
ಕೊಡುವುದುಂ ಕೊಡಿಸುವುದು ಹಿತವಚನವಿವು ಮೂರು
ಸತ್ಪುರುಷರೊಳಗಲ್ತೆ ನೆಲೆಸಿರ್ಪವು.

೯೪

ಸಜ್ಜನರ ಹೃದಯಮೇ ಬಹುಕಠಿನಮಿಳೆಯೊಳಗೆ
ಎಂಬುದೆನ್ನಯ ಮತಿಯ ದೃಢನಿಶ್ಚಯಂ,
ಅಲ್ಲದೊಡೆ ಖಲವಚನಬಾಣಗಳು ಭೇದಿಸಲು
ಒರ್ನೆಯುಮಂ ಒಡೆಯದೇ ಸಾಧುಹೃದಯಂ.

೯೫

"ಬಾಯೊಳಗೆ ಕಡಿವಾಣ, ಸಮರ ದೈವದ ವಶದೆ
ಸ್ವೇಚ್ಛೆಯಿಂ ಭಾರಮಂಹೊರುವೆಯೇನು ?"
ಎಂದ ಕತ್ತ್ರಿಯ ನುಡಿಗೆ ಕುದುರೆ ಹೂಂಕರಿಸಿದುದು
ಸುಜನರಧಮರ ತೆರದೆ ಗಳಹರೇನು?

೯೬

ಜೊಗಸೆಯಲಿ ತುಂಬಿರುವ ಕುಸುಮಗಳು ಎಡಬಲದ
ಕೈಗಳಿಗೆ ಸೌರಭವನೆಸಗುವಂತು,
ಸುಮನಸರುಮೆಂದಿಗುಂ ಋಜುಕುಟಿಲಭೇದಗಳ
ನೆಣಿಸದೆಯೆ ನಲ್ಮೆಯಿಂ ತಣಿಪರಿಂತು.

೯೭

ಪ್ರೇಮಮೆಂಬುದೆ ಬೇಡ, ಪಥಿಕನೊಡಲಾಗಲದು,
ಅದುಕೂಡ ಗುಣವಂತರೊಡನೆ ಬೇಡ,
ಅಂತಾಗಲದಕೆಂದುಮಗಲಿಕೆಯೆ ಇರಬೇಡ
ಅಂತಾದರಾಯುವ್ರಂ ಕೂಡೆ ಬರಲಿ.

೯೮

ಗಡಿಗೆ ಕುಡಿವ್ರದು ನೀರ ತನ್ನೊಡಲ ಪರಿಮಿತಂ
ಕಲಶಜಂ ಕಡಲನೇ ಕುಡಿದ ತೆರದೆ,
ಸಚ್ಚರಿತಮಾನಸರ್ ತಮ್ಮಗುಣಗರಿಮೆಯಿಂ
ತಂದೆಯನೆ ಮೀಉವರ್ ಧೀರತರದೆ.

೯೯

ಹರ ಕಾಲಕೂಟಮಂ ಬಿಡಲಿಲ್ಲವಿಂದಿಗುಂ
ಕೂರ್ಮಧರಿಸಿದ ಧರೆಯ ತೊರೆಯನೆಂದುಂ,
ಬಡಬಾಗ್ನಿಯಂ ಕಡಲು ಹೊರಗೆ ತೆಗೆದಿಡಲಿಲ್ಲ
ಒಪ್ಪಿಕೊಂಡುದ ಸುಕೃತಿ ತಪ್ಪನಿಂದುಂ

೧೦೦

ಕುದುರೆ ಕಾಲೊದೆತಮುಂ ಶ್ಲಾಘ್ಯಮದು ಲೋಕದಲಿ
ಕತ್ತೆಯಾರೋಹಣಂ ನಿಂದ್ಯಮೆನಿಕುಂ ;
ಬುಧವರರನೆದುರಿಸಿದ ಸ್ಪರ್ಧೆಯುಂ ಶ್ಲಾಘ್ಯಮದು
ಮೂರ್ಖನೊಡನಾಟ ತಾಂ ದೂಷ್ಯಮೆನಿಕುಂ

ಪ್ರಥಮ ಶತಕಂ

೧

ದಿಗ್ವಸನ ಸತಿಗೇಕೆ ವಸನ ಬಿಸನವುಮೆಂದು
ತೊಡವುಗಳ ಹಂಗು ತಾನೇಕೆ ಎಂದು,
ಸತಿಯಳಂ ಬರಸೆಳೆದು ಬಿಗಿದಪ್ಪಿಮುದ್ದಿಸಿದ
ಶಿವನೊಲಿದು ರಕ್ಷಿಸಲಿ ನಮ್ಮನೆಂದುಂ.

೨

ಸಂದರ್ಭಕನುಗುಣಂ ಸತ್ತ್ವಯುಕ್ತಮುಮೆನಿಪ
ನುಡಿಗಳಂ ನಿರ್ಭಯದೆ ನುಡಿವನಾವಂ,
ಕವಿಯವಂ ಕವಿವಾಣಿಯೇ ಕಾವ್ಯಮದರೊಳಗೆ
ನವ್ಯಸೃಷ್ಟಿಯ ಗೈವುದವನ ಭಾವಂ.

೩

ಸತ್ಕವಿಯೊಳುಕ್ಕಿಬಹ ಭಾವಸೌಂದರ್ಯಮುಂ
ನುಡಿಯ ಬೆಡಗಂ ಬಲ್ಲ ಕವಿಗಳರಿವರ್ ;
ಚಿನ್ನದಲಿ ರನ್ನಮಂ ಕುಂದಣಿಪ ಚಾತುರಿಯ
ಚಿನಿವಾರನಂತಿತರರರಿಯಲಳವೆ ?

೪

ಕವಿವಾಣಿ ಚಂದ್ರಿಕೆಗೆ ಸಹೃದಯ ಕುಮುದದೊಲು
ಬೇರೆ ಹೃದಯವು ಬಿರಿದು ಅರಳದೆಂದುಂ ;
ಪೂರ್ಣಚಂದ್ರನ ಕಳೆಗೆ ಕಡಲುಕ್ಕಿಹರಿವಂತೆ
ಕೊಳದ ನೀರುಕ್ಕುವುದೆ ಧರೆಯೊಳೆಂದುಂ ?

೫

ಹದಿನಾಲ್ಕು ಲೋಕಗಳು ಹಂಸಪಕ್ಷಿಗಳಂತೆ
ಯಾರ ಪ್ರತಿಭಾಸಲಿಲಪೂರದಲ್ಲಿ,
ಕಿರು ತೆರೆಯ ಝುರಿಗಳಲಿ ಕಳಕಳಿಸಿ ತೇಲುವವೊ
ಆ ಕವಿಯ ಮಾನಸಕೆ ಶರಣು ಶರಣು.

೬

ಭಾರತೀಲತೆಯೊಳಗೆ ಕಾವ್ಯಫಲರಸವಿಸರ
ಲೋಕೋತ್ತರಾಸ್ವಾದಮರಿವನಾವಂ ?
ಜನಮೆಲ್ಲ ಕಾವ್ಯಫಲ ಸವಿಯುವವರಾದರುಂ
ಕವಿ, ಕೇವಲಂ ಕಾವ್ಯರುಚಿಯನರಿವಂ

೭

ಮನವೆಳಿಸಿದಂತೆಲ್ಲ ಗನ್ಧಗಳ ಮೇಲೆತ್ತಿ
ಗಳಹುವರು ಲೋಕದಲಿ ಸುಲಭಮಾಗಿ,
ಕವಿ ಹೃದಯದಾಳಮಂ ಭಾವದೌನ್ನತ್ಯಮಂ
ಕವಿಯು ಮಾತ್ರಂ ಬಲ್ಲ ಸ್ಪಷ್ಟಮಾಗಿ

೮

ಕಾವ್ಯಗಳ ರಚಿಸಿದರ್ ಧನ್ಯಾತ್ಮರಿಳೆಯಲ್ಲಿ
ಕಾವ್ಯದೊಳ್ ವರ್ಣಿತರ್ ಪುಣ್ಯಚರಿತರ್,
ರವಿಚಂದ್ರರಂತವರ ಕೀರ್ತಿಯದು ಶಾಶ್ವತಂ
ಕಾವ್ಯಾಮೃತಂ ಸವಿದ ಮನುಜರಮರರ್

೯

ಸತ್ಕಾವ್ಯಮಯವಾದ ಮಾತುಗಳು ಲೋಕದಲಿ
ಬೆಳಗುವವು ರಸಿಕರೊಳಗೆಲ್ಲಿವರೆಗೆ,
ಕವಿ, ಶಾರದೆಯ ಸಿಂಹಪೀಠದಲಿ ಚಿರಕಾಲ
ಶೋಭಿಸಂ ವೈಭವದೊಳಲ್ಲಿವರೆಗೆ.

೧೦

ಕವಿ ಕಾವ್ಯದಲಿ ಭಾವಸೌರಭವ ಬೀರುವಂ
ಸಹೃದಯನದನಾಂತು ಗೌರವಿಸುವಂ,
ತರು ಕುಸುಮಬಿಡಲದರ ಸೌರಭವ ಶಿರದಾಂತು
ದೆಸೆದೆಸೆಗೆ ಬೀರುವಂ ಮಂದಾನಿಲಂ.

೧೧

ನವ್ಯಕಾವ್ಯದೊಳಿರ್ಪರಸವಿಸರ ಚಾತುರಿಯ
ರಸವಿದಂ ಬಲ್ಲನವ ಕವಿ ಕಾಣ್ಬನೇಂ ?
ಮಗಳ ಮಂಗಳರೂಪ ಸುರ ಸುರತವೈಭವವ
ರಮಣನರಿವಂತವಳ ಪಿತನರಿವನೇಂ ?

೧೨

ಕವಿ, ಕವಿತೆಯುವತಿಯಂ ತಂದೆಯೊಲು ಪೋಷಿಪಂ
ಪತಿಯಂತೆ ಪಾಲಿಪರ್ ಸರಸಹೃದಯರ್ ;
ಸುವಿವೇಕಿಗಳುಮವಳ ಸೋದರರು ತಾಮೆನಿಸಿ
ಗುಣದೋಷ ವಿವರಿಪರ್ ಬುಧಮಾನಸರ್

೧೩

ಕಾವ್ಯಾರ್ಥರಸದೂಟ ಸವಿದದಂ ಸಂಗ್ರಹಿಪ
ಸದುಹೃದಯರತಿವಿರಳ ವಿಬುಧರಲ್ಲಿ,
ಮಕರಂದ ಮಾಧುರ್ಯ ಸವಿದದಂ ಸಂಗ್ರಹಿಸೆ
ಮಧುಪಕಿಂ ಮಿಗಿಲಾರು ಲೋಕದಲ್ಲಿ.

೧೪

ಕೆಲನಿಮಿಷದವಧಿಯಲಿ ಹುಟ್ಟಳಿವುಮುಪ್ಪಿಂದ
ನರಳುವೀ ನಶ್ವರದ ವಿಶ್ವದಲ್ಲಿ,
ಕಲ್ಪಾಂತವರಮಿರ್ಪ ಕವಿಸೂಕ್ತಿಸುಧೆಯೊಂದೆ
ಬಂಧದಿಂ ಬಂಧುವೊಲು ಪೊರೆವುದಿಲ್ಲಿ.

೧೫

ಕವಿಯ ಕಾವ್ಯಾಮೃತದ ತೀರ್ಥದಲಿ ಮಿಂದಮಿತ
ಕೀರ್ತಿತನುವಾಂತಿರ್ಪ ಪೂತಾತ್ಮರು,
ಜೀವಿಸುವರನವರತಮಾಕಲ್ಪಪರಿಯಂತ
ನ್ನುಳಿದವರ್ ಮೃತರವರ ಕೇಳ್ವರಾರ್ಸೆ !

೧೬

ಕಾವ್ಯಪ್ರಪಂಚಮಂ ಬಿತ್ತರಿಪ ಕವಿವರಂ
ಕಾವ್ಯಸಾರವನರಿಯಲಾರನೆಂದುಂ,
ಮೃದುಮಧುರತರ ಫಲವ ತರು ಕೊಡುವುದು: ರ ರುಚಿ
ಯರಿವಪುದು ಪಕ್ಕಿಗಳ ಬಳಗಮಿಂದುಂ

೧೭

ವಿಬುಧ ಕವಿಯುಂ ಕವಿಯುಮೆನಲಕ್ಕು ಲೋಕದಲಿ
ಉಳಿದವರ್ ಕೇವಲಂ ಕಪಿಗಳಲ್ತೆ !
ಸತ್ಕುಲಜೆಯೋ ಜಾಯೆ ವಿಧಿವಿಹಿತ ಕೈಹಿಡಿಯೆ
ಉಳಿದವರ್ ಕೇವಲಂ ಮಾಯೆಯಲ್ತೆ !

೧೮

ಅಬುಧಕವಿ ವಿಬುಧಕವಿಯೊರ್ವರುಂ ಕವಿಗಳೇ
ವರ್ಣದೊಳಗಂತರಂ ಈರ್ವರಲ್ಲಿ,
ಕರಭಮೋ ಕಲಭಮೆಂದೆನಲಕ್ಕು ಲೋಕದಲಿ
ರ-ಲಗಳೊಳಗಂತರಂ ತಿಳಿಯುವಲ್ಲಿ.

೨೯

ರಾವಣನ ಸತ್ಕೀರ್ತಿ ಸಂಕುಚಿತಮಾದತ್ತು
ಶ್ರೀರಾಮಚಾರಿತ್ರ್ಯ ಚೆಲುವೆತ್ತುದು,
ವಾಲ್ಮೀಕಿ ಕಾವ್ಯಪ್ರಭಾವದಿಂದೆನಲಿನ್ನು
ಮುಳಿದವರ್ ಕವಿ ಕೆಣಕಿ ಬದುಕರೆಂದುಂ.

೩೦

ಸಾಹಿತ್ಯವಿದ್ಯೆಯಲಿ ಪರಿಣತಿಯ ಪಡೆಯದಿರೆ
ಕವಿಕರ್ಮಶೋಭಿಪುದೆ ಗುಣಗಳಿಂದ
ಎಣ್ಣೆ ನೀರಿಲ್ಲದಿಹ ನಾರಿಯರ ಕೇಶಗಳು
ಶೋಭಿಸುವುವೇಂ ಧೂಪವಾಸದಿಂದ,

೨೧

ಅರಕರಾಸ್ಥಾನದಲಿ ಸತ್ಕವಿಗಳಿಲ್ಲದಿರೆ
ಸರಸರೆಂತಾಗುವರು ರಸಿಕರಿಳೆಯೊಳ್
ಭೂಪಾಲರೆನಿತೊ ಜನ ರಾಜ್ಯಗಳ ಕಟ್ಟಿದರು
ಅವರನಾರ್ ಪೆಸರಿಸರ್ ಪಕ್ವಹೃದಯರ್

೨೨

ಚಾರಿತ್ರ್ಯ ಸೌಭಾಗ್ಯ ಸಾಧಿಸದ ಮಾನವಂ
ಬಯಸುವನೆ ಸತ್ಕವಿಯು ರಸಕೃತಿಗಳಂ
ಗುರುಗಂಜಿ ಬೀಜದಿಂ ಸಿಂಗರಿಪ ವನಚರಂ
ಆಳಿಪನೆ ಜಿನಿವಾರ ಚಾತುರ್ಯಮಂ

೨೩

ತರ್ಕ ಕರ್ಕಶ ಶಾಸ್ತ್ರ ಪಾಂಡಿತ್ಯಮಿರ್ದರುಂ
ಕವಿ ಕರ್ಮರಚನೆಯಲಿ ಮಧುರನೆನಿಕುಂ,
ಅಸುರನೆವೆ ಸೀಳಿರ್ದ ನಖ ಪಯಿತೆ ಕೆನ್ನೆಯಲಿ
ಕಸ್ತೂರಿ ತಿದ್ದುವೊಡೆ ಮಿದುವೆನಿಸುಗುಂ

೨೪

ಕವಿ ತನ್ನ ನಲ್ನುಡಿಯ ಚಲುವಿನಿಂ ತಣಿದರುಂ
ಕವಿವರರ ನುಡಿಜೇನ ಸವಿಯನೇನು ?
ಮಕರಂದ ಪೂರದಿಂ ತುಂಬಿರ್ದರುಂ ಮಾವು
ಸ್ವರ್ಣಕಲಶದ ಸೇಕ ಬಯಸದೇನು ?

೨೫

ಯಾರ ಭುಜವನತರುವಿನಾಶ್ರಯದೆ ಮೇದಿನಿಯು
ಸುಖಿಸಿದಳ್ ಭಯಮಿನಿತನರಿಯವಂತೆ
ಯಾರನುಗ್ರಹದಿಂದಲಾನೃಪರ ನೆನಪಿಹುದೋ
ನಮಿಪೆನಾ ಕವಿಕರ್ಮಯಶಸಿಗಿಂತು.

೨೬

ಕವಿಯಿಲ್ಲದಾಸ್ಥಾನ ರವಿಯಿಲ್ಲದಾಗಸಂ
ತನಯನಿಲ್ಲದ ರಮಣಿರೂಪಸಿರಿಯಂ
ಒಡೆಯನಿಲ್ಲದ ಸೇನೆ ಕಳೆಗುಂದಿಕೆಡುವಂತೆ
ಮೃಡನ ನೆನೆಯದ ಬದುಕು ಬೆಳಗದೆಂದು.

೨೭

ದುರ್ಲಭಂ ನರಜನ್ಮ ಧರೆ ಜೀವರಾಶಿಯಲಿ
ವಾಗ್ವನಿತೆಯೊಲಿಯುವುದು ಬಹುದುರ್ಲಭಂ
ಸರಸ ಕವಿತಾಭಣಿತಿ ಕರುಣಿವುದುಮತಿಕಷ್ಟ
ಪ್ರತಿಭೆಯುದದೊಳು ದೊರವುದತಿ ದುರ್ಲಭಂ

೨೮

ಧರ್ಮಕರ್ಮದ ಬಗೆಗೆ ಪೆರರಿಗುಪದೇಶಿಪುದು
ಸುಲಭ ಲೋಕದೊಳೆಲ್ಲಮಾನವರಿಗೆ,
ಮನ-ಮಾತು-ಮೈಗಳಿಂ ಧರ್ಮದೊಳಗಾಸಕ್ತಿ
ಸಿದ್ಧಿಸುವುದೊಬ್ಬೊಬ್ಬ ಸಾಧಕನಿಗೆ.

೨೯

ಆರುಮರಿಯದ ದಾನ ಮನೆಗೆ ಬರೆ ಸಡಗರಂ
ಪ್ರಿಯಮೆಸಗಿಯುಂ ಮೌನ ಗುಣದ ಕಥೆಯು,
ಉಪಕೃತಿಯ ನೆನೆವುದುಂ ವೈಭವದೆ ವಿನಯಮುಂ
ಅಸಿಧಾರೆ ವ್ರತಗಳಿವು ಸಜ್ಜನರಿಗೆ

೩೦

ನೀತಿಯೊಳಗಾಸಕ್ತಿ ಸದ್ವೃತ್ತಿಯಾಪದದೆ
ಬಡಗೆಳೆಯ ಬಾಂಧವರ ಬೇಡದಿರುವ,
ಆಪತ್ತಿನೊಳಗಾದ ಬಾಂಧವರ ನೆನೆಯುವುದು
ಅಸಿಧಾರೆ ವ್ರತಗಳಿವು ಸಜ್ಜನರಿಗೆ.

೩೧

ತಣ್ಣೀರ ಮೀಯುವುದು ಸಿಂಗರದ ಲೇಪನಂ
ಬಿಸಿಲಿನಲಿ ಬಳಲಿದನ ತಣಿಸುವಂತು,
ಯುಕ್ತಿಯುಕ್ತಮುಮೆನಿಪ ಸೊಳ್ನುಡಿಯನಾಲಿಪುದು
ಮಿತ್ರದೊಲು ಮಾನಸವ ತಣಿಪುದಿಂತು.

೩೨

ಸಜ್ಜನರ ಸಾಂಗತ್ಯ ಗುರುಭಕ್ತಿ ಗುಣದೊಲವು
ವಿದ್ಯೆಯೊಳಗಾಸಕ್ತಿ ರತಿಸತಿಯೊಳು,
ಶಿವಭಕ್ತಿ ಸಂಯಮವು ನಿಂದೆಯೊಳಗಂಜಿಕೆಯು
ನೆಲೆಸಿರುವ ನರನೆ ಹರ ಮನುಜರೊಳಗೆ.

೩೩

ಆಳರಸು ಭೇದಗಳ ಪರಿಯುಂಟೆ ಮನುಜರಲಿ
ಸುಜನರೊಡನಿರಲೆಲ್ಲ ಕುಲಜರೆನಿಸರ್,
ಮಲಯ ಗಿರಿಯೊಳು ಬಳೆದ ಚಂದನದ ಸಂಗದಿಂ
ವಿವಿಧ ತರುಕುಲಮೆಲ್ಲ ಶ್ರೀಚಂದನಂ.

೩೪

ಒಳಿತು ಕೆಡು ನುಡಿಗಳಿಂ ಬಾಯಾಳಿ ನುಡಿದರುಂ
ಜಾಣನದರೊಳು ಗುಣವ ಕೊಂಬನೆಂದುಂ,
ಪಾಲು ನೀರಂ ಬೆರಸಿ ಮುಂದಿಡಲ್ ಮುದದಿಂಪ
ಪಾಲನೇ ತಾಂ ಕೊಂಬುದಂಚೆಯೆಂದುಂ.

೩೫

ಕೈಗೆ ಚಾಗಂ, ಶಿರಕೆ ಗುರುಪಾದವಂದನಂ
ಮುಖಕೆ ಸತ್ಯಂ ಭುಜಕೆ ಶೌರ್ಯಮೆಂದುಂ,
ನೈರ್ಮಲ್ಯ ಮಾನಸಕೆ, ಶ್ರುತ ಕಿವಿಗೆ ಭೂಷಣಂ
ಚಿನ್ನದೊಡವೆಯು ಸುಜನತೆಳಸರೆಂದುಂ,

೩೭

ಮೈ ಮಾತು ಮನಸಿನಲಿ ಪುಣ್ಯರಸ ತುಂಬಿರುವ
ಮೂಲೋಕಮುಪಕೃತಿಯ ನೆನೆಯುತಾವಂ,
ಅಣುಮಾತ್ರದುಪಕೃತಿಯ ಬೆಟ್ಟದೊಲು ಭಾವಿಸುವ
ಸುಜನರೆನಗೆನಿತು ದಿನಮೊರೆವರಿಂತು !

೩೭

ಧೃತಿಗೆಡರೆ ಸಜ್ಜನರು ವಿಪದಂಗಳಡಸಿದರು
ಕರಘಾತದಿಂ ಚೆಂಡು ಪುಟವುದೆಂದುಂ,
ಮರ ಕಡಿಯೆ ಚಿಗುರದೇ ಎಳೆವೆರೆಯು ವರ್ಧಿಸನೆ
ಕಳೆಗುಂದುವನೆ ಸುಜನ ವಿಪದದಿಂದಂ !

೩೮

ಪರರಿಂದಮುಪಕಾರ ಬಯಸದೆಯೆ ಕಷ್ಟದೊಳು
ಉಪಕರಿಸಿ ಸಜ್ಜನರ್ ದೂರ ಸರಿದು,
ಆಪದಡೆ ತಗ್ಗದೆಯೆ ಸಂಪದದೆ ಹಿಗ್ಗದಯೆ
ಲಕುಮಿಯಂ ಪುಲ್ಲಮಂ ಜರೆವರಿವರು !

೩೯

ಧೀರರುರು ತೇಜಮುದು ವಿಪದದೊಳಗೆಂತಂತು
ಸಂಪದದೆ ಲೋಕದೊಳು ಕಾಣದೆಂದುಂ,
ಅಗರು ಸಿರಿಗಂಧಗಳು ಬೆಂಕಿಯೊಳು ಬಿಳ್ದರುಂ
ಸೌರಭವ ಸೂಸುವುದ ಕಾಣ್ಬೆವಿಂದುಂ

೪೦

ಸಿಡಿಲಿನೊಲು ಕಡುಬಿರುಸು ಪೂವಿನೊಲು ಬಲು ಮಿದುವೆ
ಸುಜನಮಾನಸದಿರವನರಿಯಲರಿಮು,
ಮರದ ಬುಡಕೆರೆದ ನೀರ್ ತುದಿ ಚಿಗುರಲೆಸೆವಂತೆ
ಸುಜನಕಿನಿತೆಸಗಿದರುಮಹತೆನಿಪುದು,

೪೧

ಪಾಪಮಂ ಪರಿಹರಿಪ, ದಾನದಿಂ ಕೆಂಗೊಳಿಪ
ಪರಿಶುದ್ಧ, ಸದ್‌ವ್ರತವ ಸಾಧಿಸಿರ್ಪ,
ಸರ್ವರಂ ಸುಖಗೊಳಿಸ ಸುಜನರತಿ ದುರ್ಲಭರ್
ಗಂಗೆ ಗಜ ಬಾನ್ ಭೀಷ್ಮ ಗಾನದಂತೆ,

೪೨

ನೆನೆದಂತೆ ನುಡಿಯುವರ್ ನುಡಿದಂತೆ ನಡೆಯುವರ್
ವ್ಮೈ ಮಾತು ಮನಸೊಂದು ಸುಜನ ರಿಳೆಯೊಳ್,
ಕುಪಿತಕಠಿನಂ ಸುಜನ, ನಯದಿಂದ ಮೃದುವಹಂ,
ಚಿನ್ನ ಬೆಸೆವೊಲು ಪುಲ್ಲ ಬೆಸೆಯಲಳವೆ ?

೪೩

ವಿನಯದಿಂದುನ್ನತರ್ ಬಹುಯತ್ನ ಸಾಧಕರ್
ಕೊಂಡಾಡಿ ಪರಗುಣವ ಗುಣಿಗಳೆನಿಪರ್,
ಶಮದಿನುಪಶಮಿಸುವರ್ ದುರುಳರಪವಾದಗಳ
ವಿನುತ ಸುಜನರ್ ಜಗದೆ ಧನ್ಯಚರಿತರ್.

೪೪

ಹೆರರಿಗುಪಕರಿಸುವುದೆ ಸುಜನ ಜೀವಾದರ್ಶ
ತಂಪಿಪುದೆ ಚಂದನಂ ತನ್ನ ತನುವ ?
ಕಾಗೆ ಜೊತೆ ಬೆಳೆದರುಂ ಕೋಗಿಲೆಯ ಪರಿ ಬೇರೆ
ಕೆಡುಗುಮೇ ದುರುಳರಿಂ ಸುಜನಮನವು ?

೪೫

ತನ್ನ ಸುಖ ಬದಿಗಿಟ್ಟು ಹೆರರಿಗಾಗಿಯೆ ದುಡಿಮೆ
ಸಾಧು ಜನಕೀ ಬಗೆಯ ವೃತ್ತಿಯೆಂದುಂ,
ಉರಿಬಿಸಿಲನನುಭವಿಸಿ ತಲೆಯಲ್ಲಿ ಸೇಕಾಲ
ಬಳಲಿದರ ಬಳಲಿಕೆಯ ಕಳೆವುದಿಂದುಂ,

೪೬

ಬೆಸನದೊಳು ತಗ್ಗದೆಂಪಿ ಸಂಪದದೆ ಹಿಗ್ಗದೆಂಪಿ
ಗೆಳೆಯರಿಗೆ ಜೀವನವ ಮುಡುಪಾಗಿಸರ್
ನಿಜಗುಣವ ಬೆಳಗಿಸದೆ ಕೊಂಡಾಡಿ ಹೆರರ ಗುಣ
ತರ್ಕಿಸುವ ಸುಜನರೀ ಲೋಕತಿಲಕರ್

೪೭

ಸುತನಪಂ ನಲ್ಗುಣಗಳಿಂ ಪಿತನ ತೋಷಿಪಂ
ಸತಿಯವಳ್ ಪತಿ ಹಿತವ ಬಯಸಳೇಗಳ್,
ಗೆಳೆಯನಾಪದವಿಪದವೆರಡರೊಳು ಸಮನಿಪಂ
ಮೂರರಿಂ ನರ ಸುಕೃತಿಯೆನಿಪನಿಳೆಯೊಳ್.

೪೮

ಸ್ನೇಹಮಂ ಪಾತ್ರಮಂ ದೆಸೆಯನುಂ ನೆನೆಯದೆಯೆ
ಬೆಳಕ ಬೀರುವ ರತ್ನದೀಪದಂತೆ,
ಲೋಕಹಿತರತರೆನಿಪ ಮಾನಸರ್ ಲೋಕದಲಿ
ಸ್ನೇಹ–ಪಾತ್ರತೆ-ದೆಸೆಯ ಬಯಸರೆಂದುಂ.

೪೯

ಒಳ್ನಡತೆ ನಲ್ಮಾತು ಪಾಲ್ಬಗೆಯು ತಿಳಿ ತಿಳಿವು
ಒಳಹೊರಗೆ ಮುಕುರದೊಲು ನಿಕರಮೆನಿಪ,
ಪಳಿಪೊರ್ದದನುಭವಂ ಜೇನ್ಗೆಳಮೆ ಕನಿಕರಂ
ಸುಜನರೊಳತಿರುಳಿದುವೆ ಸುಕರಮೆನಿಸ.

೫೦

ಕಷ್ಟಸಂಕಲೆಯೊಳಗೆ ಸಿಕ್ಕಿರ್ದರುಂ ನಿರುತ
ಒಳಿತನೇ ಬಯಸುವರ್ ಸುಜನರಿಳೆಯೊಳ್,
ಪಜ್ವಳಿಪ ಬೆಂಕೆಯಲಿ ಬಿರ್ದುರಿವ ಸಿರಿಗಂಧ
ಪರಿಮಳವ ಬೀರುವುದು ಪರ್ಬುವೆಲ್ಲರೊಳ್,

೫೧

ಲೋಕಹಿತ ಸುಗುಣಗಣಭೂಷಿತರೊಳೊಗೆದಮಿತ
ರೋಷಮುಂ ರಮಣೀಯಮೆನಿಕುಮಿಳೆಯೊಳ್,
ಲೋಕಹಿತ ಸೌರಭವ ಬೀರುವೀ ಕೇಸರದ
ಗಾಟು ಕೆರಳಿಪುದೆನಿತು ಸೊಗವ ಬಗೆಯೊಳ್,

೫೨

ಪಾಲ್ಗಡಲ ಕಡೆವಂದು ಸುಜನ ದುರ್ಜನರುಗಮ
ಮಿವಕಿಲ್ಲ ಸಂದೇಹಮಾದರಿಳೆಯೊಳ್,
ಮೊದಲವಂ ಚಂದಿರನ ಸೋದರಂ ಮತ್ತೋರ್ವ
ನಂಜಿನೊಡಹುಟ್ಟಿದಂ ಸಾಜ ಗುಣದೊಳ್,

೫೩

ರವಿಯು ಪಡುಗಡೆಯುದಿಸಿ, ಮೇರು ಸಂಚರಿಸಿದರು,
ಬೆಂಕಿಯಾಂತೊಡೆ ತಣ್ಪು, ಬಿಸಿಯನಿಂದುಂ,
ಗಿರಿತುದಿಯ ಬಂಡೆಯಲಿ ಕಮಲಬಿಡದರಳಿದರು
ಕವಲು ನುಡಿಯಾಡರ್ಲೆ ಸುಜನರೆಂದುಂ.

೫೪

ಹಗೆ ಬೊಮ್ಮನೊಮ್ಮಗಂ, ನಡೆದ್ಪೆದೆ ಕಡಲ ತಡೆ
ಲಂಕೆ ಗೆಲ್ವೊಳಲಲ್ಲಿ ಕಪಿಗಳೊಲವ್ರ,
ತರಿದ ರಿಪುಕುಲಮೊರ್ವ ರಾಘವಂ ತಾನಲ್ತೆ!
ಸಿದ್ಧಿಕಾರಣ ಸತ್ವ ಕರಣಮಲ್ತು !

೫೫

ಚಕ್ರಮೊಂದೇ ರಥಕೆ ಪಾವ್ ಪಗ್ಗಮೇಳ್‌ಕುದುರೆ
ಹಾದಿ ನೆಲವಿಲ್ಲಿ, ಸಾಬಿ ಕಾಲಿಲಿಯೆನಲು
ದಿನದಿನಂ ರವಿ ನಡೆವ ಕಡೆಯಿಲ್ಲದಾಗಸವೆ
ಸಿದ್ಧಿಕಾರಣ ಸತ್ವ ಕರಣಮಲ್ತು !

೫೬

ಸ್ವಾರ್ಥಿಗಳ್ ಕೆಲಂಹರ್ ಪಾಳ್ಪೊಟ್ಟೆಪೂರ್ತೈಸೆ,
ಹೆರರ ಹಿತಕಾವಗಂ ಸಾಧು ದುಡಿವಂ ;
ಕಡಲ ಕುಡಿಗುಂ ವಡಬ ಜಠರಮುರಿಯಾರಿಸಲು
ಜೇಗೆ ಕಳೆಯಲ್ಮುಗಿಲು ನೀರೀಂಟುಗುಂ.

೫೭

ಸಂಪದದೆ ಸುವಿವೇಕ, ಬಿಜ್ಜೆಯೊಳು ಸದುವಿನಯ
ಬಡತನದೆ ಬಡವರೊಳಗಿರಲು ಕರುಣೆ
ಗೋಗರೆದು ಕೈಲ್ ಪತ್ತಿ ಕಷ್ಟದಿಂದೊಳ ಪೊಕ್ಕು
ಬರುವವರ ತಳ್ಳದಿರಲವನೆ ಶರಣ,

೫೮

ಹಿತ ಬಯಸುವೊಡೆ ಯೆಸಗು ಸುಜನ ಸಹವಾಸಮಂ
ಜೇನ್ನುಡಿಯ್ಟಿ ರಸಕುಸುಮ ಕೆರಗುವಂತೆ,
ಬಯಸಿದುದು ಲಭಿಸುವುದೆ ಸುಜನ ಕೆಳೆಯಿಲ್ಲದೊಡೆ
ತಿಂಗಳಿರದೊಡೆ ತಾಪ ತವಿವುದೆಂತು ?

೫೯

ಗಂಗೆಯುರು ಪಾಪಮಂ ಶಶಿಯು ಸಂತಾಪಮಂ
ದೈನ್ಯತೆಯ ಕಲ್ಪಕುಜ ಕಳೆವುದೆಂದುಂ,
ಪಾಪ–ಸಂತಾಪಗಳ ದೈನ್ಯತೆಯ ಮೂರನುಂ
ಸುಜನ ಸಹವಾಸ ತಾಂ ಕಳೆವುದಿಂದುಂ ;

೬೦

ಗುಣರಹಿತನೆಂದಿಗುಂ ಸುಗುಣಿಯಂ ಗುರುತಿಸನು
ಮತ್ಸರಿಪನಿಂದಿಗುಂ ಗುಣಿ ಗುಣಿಯೊಳು;
ಗುಣವಂತನಾಗಿಯುಂ ಗುಣಿಗಳಂ ಗೌರವಿಪ
ಸರಲಜನವತಿ ವಿರಳ ಧರಣಿಯಲ್ಲಿ

೬೧

ಕಲುಷಿತನ ಕಳೆಯಬಿಡು, ಕುಲಹಿತವನಾಳ್ಕೈದು
ಬಿಡಬೇಕು ಕುಲಮುಮಂ ಪುರದ ಹಿತಕೆ,
ನಾಡಹಿತಮಾರ್ಕೈದು ಬಿಡಬೇಕು ಪುರಮುಮಂ
ಪೊಡವಿಯನೆ ಬಿಡಬೇಕು ಆತ್ಮಹಿತಕೆ.

೬೨

ಬಸುಕು ಗುಡದಾ ನಾಡು, ನಿಡುತೊಡಕುಗೊಡು ಬದುಕು
ಕಪಟ ಗೆಳೆಯನ, ಜೀವ ಕಳೆವ ಹಣವ ;
ಸೌಹಾರ್ದಮಣಮಿರದ ಸೋದರನನಾದರುಂ
ತೊಳೆದು ಕಳೆ ಕೊಳೆಯಂತೆ ಬಿಡದೆ ಜಣವ.

೬೩

ಆಡುಗಳ ಹೋರಾಟ, ಕಲಿತವರ ಕಾದಾಟ,
ಮುಂಜಾನೆ ಮುಸುಗಿಬಹ ಮುಗಿಲ ಸೋನೆ,
ಗಂಡಹೆಂಡಿರ ಜಗಳ ಮೊದಮೊದಲು ಬಲು ಬಿರುಸು
ಕಡೆ ಕಡೆಗೆ ಕರಗುವುವು ತಮಗೆ ತಾವೆ!

೬೪

ಪೆಣ್-ಪಸುಳೆ-ಗೆಳೆಯ-ಗೋ-ಪಾಲಿಪರ ಕೊಲುವವಂ,
ವಿಶ್ವಾಸಘಾತುಕಂ, ಶ್ವಪಚನೆನಿಕುಂ ;
ಬ್ರಹ್ಮವಧೆ-ಮಧುಪಾನ-ಕಳವುಗಳಿಗೆಳಸುವಂ,
ಉಗ್ರತರ ನರಕದೊಳ್ ಚಿರ ನಿವಸಿಪಂ

೬೫

ಬ್ರಹ್ಮವಧೆ-ಮಧುಪಾನ-ಕಳವು-ಗುರುತಲ್ಪಗಮು
ಮೇಣಿವರ ಗೆಳಮೆಯುಂ ಗೈವ ಮನುಜಂ,
ಕಡೆಯಿರದ ದುಗುಡದಲಿ ನಿಡುಗಾಲ ಪರಿತಪಿಸಿ
ಉಗ್ರತರ ನರಕದೊಳಗಿಳಿವ ಸಹಜಂ.

೭೬

ಎಂತಾದರುಂ ಅಕ್ಕೆ ಏನಾದರುಂ ಅಕ್ಕೆ
ಜಸಗಳಿಸದಿರೆ ಪುರುಷನೆನಿಸನಿನಿಸುಂ ;
ಘಟಮಾದರುಂ ಪೊಡೆಸು ಪಟಮಾದರುಂ ಹರಿದು
ಕತ್ತೆಯಾದರು ಹತ್ತಿ ಜಸವ ಗಳಿಸು.

೭೭

ಋಣಶೇಷ ರಿಪುಶೇಷ ತಿಳಿಯಲಗ್ನಿಯ ಶೇಷ
ಉಳಿಸದಿರು ಬೆಳೆದಪವು ಮತ್ತೆ ಮತ್ತೆ ;
ಬಯಸದಿರು ಪರವಧುವ, ನಂಬದಿರು ನಾರಿಯರ
ದಶವದನ-ದಶರಥರ ಪೆಸೆಯ ನೆನೆನು.

೭೮

ವಿಷಲಿಪ್ತ ವಾಕ್ಪರುಷ ವಾಗ್ಬಾಣಮಿಸೆಯದಿರು
ವಾಕ್ಪರುಷ ಕುರುಕುಲವ ದಹಿಸಿತಲ್ತೆ !
ಮೃದುವಚನ ಸದುವಿನಯ ಮುಂಬೆಳಗು ಜೀವನಕೆ
ಮಾತು ಮಾನವನದೆಯ ದೀಪಮಲ್ತೆ

೭೯

ಪುಲ್ ಹಗುರಮದಕಿಂತಲರಳೆ ತಾಂ ಬಲು ಹಗುರ,
ಬೇಡುವುದುಮೆರಡರಿಂ ಹಗುರಮೆನಿಕುಂ,
ನೀಚತೆಯನೊವಗಿಸುವ ಯಾಚನೆಯ ಮಾಡದಿರು
ಬಲಿಯ ಬೇಡಲು ಹರಿಯು ಕಿರಿಯನಾದಂ

೭೦

ಪತಿಯ ಸಂಗಡೆ ಸತಿಯ ಕತೆಯು ಪತಿಯತಂಕ್ಕು
ವಿಷವೃಕ್ಷ ಬಳಸಿರುವ ಬಳ್ಳಿಯಂತೆ ;
ಮಧುರತಾನಾಡೊಡಂ ಮುಟ್ಟಿದರ ಮೂರ್ಛಿಪುದು
ಸಹವಾಸ ಬೆಸನಗಳ ಬೆಸುಗೆಯಲ್ತೆ !

೭೧

ದ್ರಾಕ್ಷೆ-ಜೇನ್ಮೊಸರು-ಪಾಲ್ಮಧುರಮೆನಿಸಿರ್ದರುಂ
ಅವನವನಿಗೊಲಿಪುದೇ ಮಧುರಮಂತೆ ;
ಹೆತ್ತವಗೆ ಹೆಗ್ಗಣಂ ಕೂಡಿದಗೆ ಕೋಪಗಂ
ರುಚಿಸುವುದು ಲೋಕದಲಿ ವಿಹಿತವಲ್ತೆ !

೭೨

ಸಂಗೀತ-ಸೌರಭ್ಯ-ತಾಂಬೂಲವೊಳ್ನುಡಿಯು
ನಲ್ಲೆ-ನಲ್ಗೆಳೆಯರುಂ ದೊರೆವುದರಿದು,
ಪೊಸ ಪೊಸತು ಸುಖಗುಡುವರನುದಿನಂ ಸೇವಿಸಲು
ರಸೆಯೊಳಿವ ಗಳಿಸಿದವ ಧನ್ಯನಲ್ತೆ !

೭೩

ನದಿಯಲ್ಲಿ ನಖಿಯಲ್ಲಿ ಶೃಂಗಿಯಲಿ ಶಸ್ತ್ರಿಯಲಿ
ಕಾವಿ-ಖಾಖಿಯು-ಖಾದಿ ಧರಿಸಿದವರೊಳ್,
ಆರ್ಕೈದು ವಿಶ್ವಾಸ ವಿಡಬೇಕು ಪೆಣ್ಗಳಲಿ
ಅರಿಯಲಸದಳವಿವರ ಹೃದಯಮಿಳೆಯೊಳ್.

೭೪

ಮಾಟಕೂಟಗಳಿಂದ ಮದ್ದು-ಜಿದ್ದುಗಳಿಂದ
ಮಾರಣವ ಮಾಡಿದವನವನೆ ಮಡಿಗುಂ,
ಮಾಟದಿಂದೆಲ್ಲರಂ ಕೊಲಬಯಸಿದಿಂದ್ರಜಿತು
ಸೌಮಿತ್ರಿ ಬಾಣದಿಂ ತಾನೆ ಮಡಿದಂ.

೭೫

ಚಿಂತೆ ಮನುಜಗೆ ಮುಪ್ಪು, ಶಾಂತಿ ಸಿಂಗಕೆ ಮುಪ್ಪು,
ಓಡದಿಪ್ಪುದೆ ಮುಪ್ಪು ವಾಜಿಗಳಿಗೆ !
ಬಿಸಿಲು ವಸ್ತ್ರಕೆ ಮುಪ್ಪು, ಬಸುರು ಚೇಳಿಗೆ ಮುಪ್ಪು
ಪತಿವಿರಹಮೇ ಮುಪ್ಪು ಮಹಿಳೆಯರಿಗೆ

೭೬

ಗುಣ-ದೋಷವೆರಡನುಂ ಸ್ವೀಕರಿಸ ಬುಧವರಂ
ಶಿವನು ಶಶಿ-ಗರಳಗಳ ಗ್ರಹಿಸಿದಂತೆ
ಮೊದಲನಭಿನಂದಿಸುತೆ ಶಿರಸಿನಲಿ ಧರಿಸುವಂ
ಮತ್ತೊಂದ ಕೊರಳಿನೊಳಗಿರಿಸಿ ಪೊರೆವಂ.

೭೭

ದಾರುಣಾಗ್ರೇಸರಂ ತಾನೆಂದು ನೀನೇಕೆ
ಶಿಶು ವಿಷವೆ ! ಸುಮ್ಮನೇ ಹೆಮ್ಮೆಪಡುವೆ ?
ನಿನಗಿಂತ ಕಟುವೆನಿಪ ದುರ್ಜನೋಕ್ತಿಗಳೆಷ್ಟೊ
ಈ ಲೋಕದೊಳಗಿಪ್ಪುವರಿಯದಿಹೆಯಾ ?

೭೮

ಒಳ್ನುಡಿಗೆ ಒಲಿಯುವವು ಜಗದ ಜೀವಿಗಳೆಲ್ಲ
ಒಳಿತ ನುಡಿ ; ನುಡಿಗೆ ಬಡತನಮುಮುಂಟೆ ?
ಮಾತುಬಲ್ಲವನಿರದೆ ಮಾಣಿಕ್ಯಮಂ ತರುವ
ಮಾತು ಮಾನವ ನೆದೆಯ ದೀಪಮಲ್ತೆ !

೭೯

ಐವರೊಡನಾಡುವುದು ಐವರೊಡಗೂಡುವುದು
ಪಯಣಮುಂ ಐವರೊಡನಾಗೆ ನರಗೆ
ಸಹವಾಸ-ಮಾತುಕತೆ ಸುಜನನ್ಸೈವರೊಳಾಗೆ
ಮನುಜನೇ ಮಹದೇವನೆನಿಸನಿಳೆಗೆ

೮೦

ನಯವಿದನ ಮೃಗಪಕ್ಷಿ ರಕ್ಷಿಪವು ನೆರವಿತ್ತು
ಕಾದಿದವು ಕಪಿ-ಹದ್ದು ದಾಶರಥಿಗೆ,
ದುರ್ಮಾರ್ಗಿಯಾದವಗೆ ಮಾರನಹ ಸೋದರಂ
ತಮ್ಮನುಂ ದಶಶಿರನ ತೊರೆವನಲ್ತೆ !

೮೧

ನಾಲಗೆಯ ತುದಿಯಲ್ಲಿ ನಲಿಯುವಳು ವರಲಕ್ಷ್ಮಿ,
ನಾಲಗೆಯ ತುದಿಯಲ್ಲಿ ಬಂಧುಬಳಗ,
ನಾಲಗೆಯ ತುದಿಯಲ್ಲಿ ಬಂಧಮೋಕ್ಷಗಳೆಲ್ಲ.
ನಾಲಗೆಯೆ ಹೊಣೆ ಏಳು ಬೀಳುಗಳಿಗೆ.

೮೨

ಮಾಡಿದುದ ಮರೆಸುವವನ ಕೇಡನುರೆ ಬಯಸುವನ,
ನಾರಿಕೊಲೆಗಡುಕ, ಕಡು ನೀಚನರರನಂ,
ನನ್ನಿಗೆರಡೆಣಿಸುವನ ಚಿನ್ನವಂ ಕದಿಯುವನ,
ಮನ್ನಿಸುವ ಶಾಸ್ತ್ರವಿಧಿಯಿಲ್ಲವಿಳೆಯೊಳ್.

೮೩

ಗಳಿತಸಿರಿ ನಿಂದಿಸಂ ಜೋಯಿಸನನೆಡೆಬಿಡದೆ
ಗಳಿತಾಯು ನಿಂದಿಸಂ ಭಿಷಜವರನಂ ;
ತಿಳಿಗೇಡಿ ನಿಂದಿಸಂ ಬಳಿವಿಡಿದ ಬಾಂಧವರ,
ಒಳಿತನರಿವನೆ ದೈವವಂಚಿತಾತ್ಮಂ !

೮೪

ನಿಜಬುದ್ಧಿ ಕಡುಲೇಸು ಗುರುಬುದ್ಧಿ ಮಿಗೆ ಲೇಸು
ಗೆಳೆಯ ಬುದ್ಧಿಯು ಕೊಳೆಯ ತೊಳೆವುದೆಂದುಂ;
ಪ್ರಳಯಮೈಖಲಬುದ್ಧಿ ಪರಬುದ್ಧಿ ಪಾಪಕರ
ಶಿಶುಬುದ್ಧಿಯಿಂ ಜನವು ನಶಿಪುದೆಂದುಂ.

೮೫

ಅಮೃತಮುಂ ವಿಷದಿಂದೆ, ಕನವರಂ ಕಸದಿಂದೆ
ಸಚ್ಚರಿತಮುಂ ನೀಚಕುಲಜನಿಂದಂ ;
ಸ್ತ್ರೀರತ್ನಮುಂ ದುಷ್ಟಕುಲದಿಂದಲಾದರುಂ
ಸೊಳ್ನುಡಿಯ ಶಿಶುವಿನಿಂ ಗ್ರಹಿಲಕ್ಕುಂ.

೮೬

ಧನದಿಂದ ಲೋಭಿಯುಂ, ಕೈಮುಗಿಯೆ ಕುಪಿತನುಂ
ಅನುಸರಣೆಯಿಂ ಮೂಢಮನುಜ ಸುವಶಂ ;
ತಿಳಿದವಂ ತತ್ತ್ವಾರ್ಥಚಿಂತನದೆ ವಶನಕ್ಕು
ಮುಕ್ಕಣ್ಣನಾದರುಂ ಮೂರ್ಖನವಶಂ

೮೭

ಭಟನಳವ ಕಾಳಗದೆ, ಬಾಂಧವರ ದುಗುಡದಲಿ
ಕಷ್ಟದಲಿ ಕೆಳೆಯ ಗುಣ ಕಾಣಲಕ್ಕುಂ ;
ಅಳಿಯೆ ವಿಭವಂ ಪೆಂಡಿರನುನಯುವ ಪರಿಕಿಪುದು
ಬೆಳೆಯ ಗುಣ ನೋಳಿಯುಲ್ಲೆ ತಿಳಿಯಲಕ್ಕುಂ

೮೮

ದೂರದಲ್ಲಿರುವವಗೆ, ನೀರಿನಲಿ ಮುಳುಗುವಗೆ
ಧಾವಿಸುವಗಂ ಧನದೆ ಬೀಗುವವಗಂ,
ಕ್ರೋಧವಂತಗೆ ಕುಡಿದು ಕುಪ್ಪಳಿಸುವಾತನಿಗೆ
ವಂದನೆಯು ನಿಂದಿತಂ ಮಂದಮತಿಗೆ

೮೯

ಇರುವೆ ಗಳಿಸಿದ ದವಸ, ಪರಮೆ ಗಳಿಸಿದ ಮಧುವು
ಜೀನನಾರ್ಜಿಸಿದರ್ಥ ಪರರ ಪಾಲು ;
ಭಕ್ತಿಯಿಲ್ಲದ ಪೂಜೆ ಯುಕ್ತಿಯಿಲ್ಲದ ದುಡಿಮೆ
ನೇಮವಿಲ್ಲದ ನರನ ಬಾಳು ಹಾಳು.

೯೦

ನಾಲಗೆಯ ನಲುಗಿಸಂ ಧೀರ ಕಡುನೀಚನಲಿ
ನರಿಗೆ ಶರಮಂ ಬಿಡುವರಾರು ಜಗದೊಳ್ ?
ಬಾಲನಲಿ ರತಿಕೇಳಿ ಬಣ್ಣಿಸಿಯು ಫಲಮೇನು
ಕರುಣೆಕಣವುಂಟೇನು ಕಾಲನೆಡೆಯೊಳ್,

೬೧

ಬೇಡಿದುದ ನೀಡುವಂ, ಬೇಡದೆಯೆ ಜೀವಿಪಂ,
ಕ್ಷಮೆಯುಳ್ಳ ಭೂಮಿಪಂ, ದಾನಿ ಬಡವಂ ;
ರಣದೆ ಗತಜೀವಿತಂ, ಯೋಗರತಮಾನಸಂ
ದಾಂಟೆ ರವಿಮಂಡಲವ ಮೆರೆವನನಿಶಂ.

೬೨

ಗೃಹಪತಿಯು ತಾನೆನಿಸಿ ಧರ್ಮರತನಾಗದವ
ಸಂನ್ಯಾಸಿಯೆನಿಸಿಯುಂ ಸಪರಿಗ್ರಹಂ
ತಲೆಶೂಲೆಗುಡುವಿವರ ಕಳೆದು ಬಿಡು ತಡೆಯದೆಯೆ
ಉರಗ ಕಚ್ಚಿರ್ಪ ಬೆರಳ ತರಿವ ತೆರದೆ.

೬೩

ಅಗಲಿದೊಡೆ ದುಗುಡಮಂ ಗೆಳೆಯನಮಗೀಯುವಂ
ಕೂಡಿದೊಡೆ ದುಗುಡಮಂ ಕೊಡುವ ರಿಪುವುಂ
ನಮಗೀರ್ವರುಂ ದುಗುಡ ನೀಡುವೊಡೆ ಸಮರೆನಲ್
ಶತ್ರು ಮಿತ್ರರೊಳಾವ ಭೇದ ಭಾವಂ?

೬೪

ನೀತಿಯಿಲ್ಲದ ಸತಿಯು ಪ್ರೀತಿಯಿಲ್ಲದ ಗೆಳೆಯ
ಮಾತಿಗುತ್ತರ ಕೊಡುವ ಭೃತ್ಯನಿದಿರೊಳ್,
ಪಾವಿರ್ಪ ಗೃಹವಾಸ ದುರ್ಜನರ ಸಹವಾಸ
ಮೃತ್ಯುದವಡೆಯ ವಾಸ ಮನುಜಗಿಳೆಯೊಳ್,

೬೫

ಧ್ಯಾನದಲಿ ಸಂಗರದೆ ದಾನದಲಿ ತೊಡಗಿರಲು
ನವಿರೇರಿ ತನ್ಮಯತೆ ತಾಳಲಕ್ಕುಂ ;
ತನಗೆಯುಂ ಪರರಿಗುಂ ಮುದವ ಮೂಡಿಸದಿರ್ಪ
ಧ್ಯಾನ–ಪೌರುಷ-ದಾನಕೇನು ಲೆಕ್ಕಂ ?

೯೬

ಪ್ರಸ್ತಾರವೇ ಮಿಗಿಲು, ನಿಸ್ಸಾರ ವಸ್ತುವಿಗೆ
ಸಾರವಪ್ಪವಸ್ತು ತಾಂ ಮೌನಮಿರ್ಕುಂ,
ಕಂಚುವೊಳಗಿಪ ತೆರದೆ ಕನಕನೇಂ ಮೊಳಗುವುದೆ
ರವಿಗೆ ಕೈದೀವಿಗೆಯ ಬೆಳಕು ಬೇಕೆ?

೯೭

ಪ್ರತಿಮಾಸದೊಳಗುಭಯ ಪಕ್ಷದಿರುಳುಗಳಲ್ಲಿ
ತಿಂಗಳಿದು ಸಮಮಾಗಿ ಬೆಳಗುತಿರಲು,
ಶುಕ್ಲ-ಕೃಷ್ಣಗಳೆಂದು ಪೆಸರಿಪ್ಪುದು ಲೋಕಜನ
ಪುಣ್ಯವಶದಿಂ ಜಸವು ಲಭಿಪುದಿಳೆಯೊಳ್.

೯೮

ಮೀನು ಮೊಸಳೆಯುಮರಿಗು ಪಾಲು ನೀರಿನ ಬೆಡಗ
ಪಾವರಿವುದಾದರುಂ ಲೋಕದಲ್ಲಿ,
ಪಾಲು-ನೀರಿನ ಬೆಸುಗೆ ಬಿಡಿಪುದರಸಂಚೆಯೆನೆ
ಪುಣ್ಯವಶದಿಂ ಜಸವು ಲಭಿಪುದಿಳೆಯೊಳ್.

೯೯

ಕಾಮಿಸಿದಳೈವರಿಂ ಕುಂತಿ ; ಸೊಸೆಯೈವರಿಂ
ಕಾಮಿಸಿದಳಾದರುಂ ಸತಿಯರಿಂದು;
ಕೂಗಿದುದು ಲೋಕಜನ ರಾಗದಿಂ ವಂದಿಸಿತು
ಪುಣ್ಯವಶದಿಂ ಜಸವು ಲಭಿಪುದಿಳೆಯೊಳ್

೧೦೦

ಆಪತ್ತಿನೊಳು ಧೈರ್ಯಮಭ್ಯುದಯದೊಳು ಶಮಂ
ಸಭೆಯುಲ್ಲಿ ವಾಕ್ಪಟುತೆ ವಿಕ್ರಮಗಳುಂ
ಕೀರ್ತಿಯೊಳಗಾಸಕ್ತಿ ಶಾಸ್ತ್ರದೊಳಗಾಸೆಯುಂ
ಪ್ರಕೃತಿ ಸಿದ್ಧಮುಮಲ್ತೆ ಮಹಿತಾತ್ಮರೊಳ್.

ದ್ವಿತೀಯ ಶತಕಂ

## ಎಸಳು 3

೧

ತಿಸನ್ನೈಸು ಮುಖಗಳುರೆ ಕುಜಗಳಲಿ ಬಿಂಬಿಸಲು
ಭ್ರಮೆಗೊಂಡು ದಸವದನ ಮತ್ತೆ ಬಂದು,
ಗಿರಿಯ ಕದಲಿಸನೆಂದು ಹೆದರಿ ದಿಗ್ಭ್ರಮೆಗೊಂಡ
.ಗಿರಿಜೆಯಪ್ಪಿದ ಹರನು ಪೊರೆಯಲೆಮ್ಮಂ.

೨

ಕೈಯಿಂದ ಕೊಡಬೇಡ ಮನೆಯಿಂದ ನೀಡದಿರು
ಅರಳುವುದು ಜೇನ್ನುಡಿಗೆ ಜನರ ಮನವು
ಪೆರರಿಗುಪಕರಿಸುವೀ ನಲ್ನುಡಿಯ ನುಡಿ ನಿರುತ
ಮಾತು ಜ್ಯೋತಿರ್ಲಿಂಗಮೆಂಬರಲ್ತೆ !

೩

ಕಾಡುಗಳ ಸುಡುವಲ್ಲಿ ಗೆಳೆಯನಹ ಮಾರುತನೆ
ದೀಪಮಂ ನಂದಿಪಂ ತಡಮಾಡದೆ,
ಆಢ್ಯನಲಿ ಗೆಳೆತನಕೆ ಜನ ತವಕಪಡುವಂತೆ
ಬಡವನಲಿ ಗೆಳೆತನವ ಬೆಳೆಸರಾರು ?

೪

ಬಡವ ರೋಗಗ್ರಸ್ತ ನಿತ್ಯಸೇವಕ ಮೂರ್ಖ
ದೇಶಾಂತರಂಗಳೊಳು ಚರಿಪ ಮನುಜಂ,
ಐವರಿವರಾವಗಂ ಬದುಕಿರ್ದರುಂ ಮೃತರು
ಬುವಿಗಿವರು ಹೊರೆಯೆಂದು ಬಗೆವರರಿದರ್

೫

ಹತ್ತಿರದೆ ಬಹುತೊಡಕು ದೂರಮಿರೆ ಫಲವಿಲ್ಲ
ಮಧ್ಯಭಾವದೊಳಿವರು ಸೇವ್ಯರೆನಿಸರ್,
ರಾಜ-ವಹ್ನಿಯು ಗುರುವು-ಮಹಿಳೆಯರವೆಚ್ಚರದೆ
ಬಳಸುವನೆ ಮತಿಯುತಂ ಮಾನ್ಯನೆನಿಪಂ,

೬

ಸುಧೆ ಮಾನವರಿಗಿಲ್ಲ, ಜಲವು ದೇವತೆಗಿಲ್ಲ,
ದುರ್ಲಭಂ ಸತ್ಪುತ್ರ ಪಿತೃಗಳಿಗೆ,
ಕಡಲೆಯಿರೆ ಹಲ್ಲಿಲ್ಲ ಹಲ್ಲಿರಲು ಹುಲ್ಲಿಲ್ಲ
ತಕ್ರವತಿದುರ್ಲಭಂ ಶಕ್ರಗೆಂದಂ.

೭

ನೊಣ-ಸೊಳ್ಳೆ-ಸೂಳೆಯರು ಮೂಷಕಂ ಯಾಚಕರು
ಗಣಕನುಂ`ಗ್ರಾಮಣಿಯರೇಳು ಜಗದೊಳ್
ಪರಭಕ್ಷಕರುಮಿವರ ನೆರೆಯಿಂದ ದೂರಮಿರು
ಸೋಂಕಿದೊಡೆ ಸುಂಕಮುಂ ಸೆಳೆವರಿರದೆ.

೮

ಅಳವಡದು ಗೌರವಂ ಹಿರಿಯನಾದವನೆಂದು
ಪೆರರಿಗೆಡರಂ ಕೊಡದೆ ಬರದು ಘರಿಮೆ,
ನಾಗನಂ ಪೂಜಿಪೊಲು ನವಿಲನೇಂ ಪೂಜಿಪರೆ !
ಗಜರಾಜನಂ ಕರೆದು ಭಜಿಪರೇನು ?.

೯

ವಿದ್ಯೆಯಿಂ ವಿಪ್ರವರ ಶೌರ್ಯದಿಂ ಕ್ಷತ್ರಿಯಂ
ದಾನದಿಂವೈಶ್ಯರ್ಯ ಶೋಭಿಸಂತೆ,
ಲಜ್ಜೆಯಿಂದಂಗನೆಯು ವಿನಯದಿಂ ತನಯನುಂ
ಶಾಂತಿಯಿಂ ಸಾಧುಜನ ಶೋಭಿಸುವುದು.

೧೦

ಗೃಹಿಣಿಯಿಲ್ಲದ ಮನೆಗೆ ಧಿಕ್ಕೃತಿ
ಮಕ್ಕಳಿಲ್ಲದ ಗೃಹಿಣಿಗೆ,
ವಿನಯಮಿಲ್ಲದ ಮಗಗೆ ಧಿಃಕೃತಿ
ಧಾನಮಿಲ್ಲದ ಧನಿಕಗೆ.

೧೧

ಅಶ್ವವಿಲ್ಲವೆ ಆನೆಯಿಲ್ಲವೆ
ವ್ಯಾಘ್ರವಿಲ್ಲವೆ ಲೋಕದೊಳ್
ಆಡುಮರಿಯಂ ಬಲಿಯ ಕೊಡುವರು
ದೈವ ದುರ್ಬಲ ಘಾತುಕಂ.

೧೨

ಉದ್ಯೋಗವೊಳ ಜಗಳ ವೈತೀಂಟೆ ಮದ್ಯಭಟ
ಪರಸತಿಯು ಮೈಥುನಂ ಜೂಜಿನೊಲವು,
ಆಹಾರ ಬೆಸನಗಳು ಸೇವಿಸಲು ವರ್ಧಿಪವು
ಮೆಟ್ಟಿತುಳಿದೊಡಮುದುವೆ ಮನುಜ ನಿಲವು

೧೩

ಸ್ವಾಮಿಯಂ ದೂರುವಂ ಕೃತಕಾರ್ಯಸೇವಕಂ
ಸತಿ ಬರಲು ತಾಯಿಯುಂ ಮಗ ನಿಂದಿಪಂ,
ಪುತ್ರವತಿ ಕಾಣುವಳು ಪತಿಯನತಿ ಲಾಘವದೆ
ಗತರೋಗಿ ನಿಂದಿಪಂ ವೈದ್ಯವರನಂ.

೧೪

ಜಲದಿ ತೈಲವು ಖಲನೊಳಾಪ್ತತೆ
ದಾನಪಾತ್ರದೊಳಾವಗಂ,
ಶಾಸ್ತ್ರ ಪ್ರಾಜ್ಞನ ಸಾರ್ದು ವಿಸ್ತೃತಿ
ಯಾಂಪುದಾತ್ಮನ ಶಕ್ತಿಯಿಂ.

೧೫

ಅಡಿಯನಿಡು ನಡೆನೋಡಿ ಸೋಧಿಸಿದ ನೀರು ಕುಡಿ
ನುಡಿ ಸತ್ಯವಚನಮಂ ಕಡೆಯತನಕಂ,
ಮಡಿಯಿಂದ ನಡೆ ನೀನು ಮನಮೆಚ್ಚಿದರ್ಥದಲಿ
ನುಡಿದಂತೆ ನಡೆವನೇ ಮೃಡ ನಿಶ್ಚಯಂ.

೧೬

ಯೌವನದೆ ಶಾಂತನಂ ಶಾಂತನೆಂದೆನಲಕ್ಕು
ಕ್ಷೀಣಿಸಲು ಧಾತುಬಲ ಶಾಂತರೆಲ್ಲರ್,
ಸಂಪದದೆ ಸಂಯಮಂ ಶೌರ್ಯದೊಳು ಗಾಂಭೀರ್ಯ
ಧೀರರೌದಾರ್ಯಮೆಂದೆಂಬರರಿದರ್.

೧೭

ಯಜ್ಞ-ಯಾಗವು ಬೇಡ ತೀರ್ಥಯಾತ್ರೆಯು ಬೇಡ
ವ್ರತ-ದಾನ-ಪೂಜೆಗಳ ಹಂಗೆ ಬೇಡ,
ಪಗಲಿರಳು ನೆರಳಿನೊಲು ಪತಿಮಾರ್ಗದಲಿ ನಡೆವ
ಸತಿಗೆ ಪತಿ ಶುಶ್ರೂಷೆ ಸಗ್ಗಮೆನಿಕುಂ.

೧೮

ನೆಲಸಾರ್ದ ನೀರು ಶುಚಿ, ಸತಿನಿಷ್ಠ ಪತಿಯು ಶುಚಿ
ಜನಹಿತವ ಬಯಸುವಾ ಜನಪ ಶುಚಿಯು,
ಸಂತೃಪ್ತಿಯಾಂತೆಸೆವ ಬಹುಜನ ಪ್ರಿಯನೆನಿಪ
ಬ್ರಹ್ಮವಿದ ವೈದಿಕಂ ನಿರುತ ಶುಚಿಯು.

೧೯

ಶುಚಿ ನಾರಿಯರ ಮುಖಂ, ಪಣ್ಕಡಿವ ಪಕ್ಕಿಮುಖ
ಮೊಲೆ ಕುಡಿವ ವತ್ಸನಾಮುಖವು ಶುಚಿಯು,
ಬೇಂಟೆಯಲಿ ಮೊಲವಿಡಿವ ನಾಯಿಮುಖ ವತಿಶುಚಿಯು
ಜೇನೀಂಟುತಿಹ ಮಧುಪ ಮುಖವು ಶುಚಿಯು.

೨೦

ಪತಿದೈವ ಪತಿ ಗುರುವು ಪತಿಧರ್ಮ ತೀರ್ಥಗಳು
ಪತಿಯೆ ಜಪತಪಮೆಲ್ಲ ಸತಿಗೆ ಸತತಂ,
ಸತಿನಿಷ್ಠ ಪತಿಯುಳಿದು ಸತಿಗಿಲ್ಲ ಬೇರೆ ಗತಿ
ಪತಿಸೇವೆಯೊಳೆ ಸತಿಗೆ ಮುಕುತಿ ನಿರುತಂ.

೨೧

ತುಂಬವಿಪ್ರ ಲೋಕದಲಿ ದಿನ ದಿನಂ ತುಂಬಿದರು
ಬ್ರಾಹ್ಮಣನುಮಗ್ನಿಯುಂ ಯಮರಾಜನು,
ನರಪ ನೀರಧಿಯುಮವರ ಗೃಹ್ಯಕೃತ್ಯಮದರಿಂದ
ಮಿಸ ತಣಿಸೆ ದಣಿಯದವ ಜಾಣನೆನಿಕುಂ

೨೨

ಮುಗಿಲತೆರೆ ಖಲದೊಲವು ನವಸಸ್ಯ ನಾರಿಯರು
ಯೌವನಂ ಧನಭೋಗ ಭಾಗ್ಯಮಿನಿತುಂ,
ಕ್ಷಣಕಾಲಮುಪಭೋಗ್ಯಮದರಿಂದೆ ಮಾನವಂ
ನಿಜವರಿತು ತನ್ನಿರವನರಿವುದೊಳಿತು.

೨೩

ಹನಿಗೂಡಿದರೆ ಹಳ್ಳ ತೆನೆಗೂಡಿದರೆ ಭತ್ತ
ನೆನೆ ಯವನೆ ವಿದ್ಯೆಯಲಿ ಧರ್ಮದಲ್ಲಿ,
ದಿನ-ದಿನಂ ಗಳಿಸಿಟ್ಟ ಕಣಕಣಂ ಗಣಿಯಾಗಿ
ಲಕುಮಿಪತಿಯೆನಿಸುವಂ ನರನು ಜಗದಿ.

೨೪

ಜಿಪುಣನಿಗೆ ಯಾಚಕಂ ಚೋರನಿಗೆ ಚಂದ್ರಮಂ
ಜಾರಿಣಿಗೆ ಪತಿಯೆ ರಿಪು ಭಾವಿಸಲ್ಲಿ,
ಹಿತಬೋಧೆಯೆಸಗುವನೆ ಮೂರ್ಖನಿಗೆ ಪರಮರಿಪು
ಘೂರ್ಖನಿಗೆ ನಿಶಿಚರರ್ ರಿಪುಗಳೆನಿಪರ್.

೨೫

ಮಂತ್ರವಿಲ್ಲದ ವರ್ಣವಿಲ್ಲವು
ಮದ್ದೆಯೆನಿಸದ ಬೇರುಗಳ್,
ಯೋಗ್ಯನಲ್ಲದ ಪುರುಷನಿಲ್ಲವು
ಯೋಜಕಂ ಬಹುದುರ್ಲಭಂ.

೨೬

ಪೆರರಿಗುಪದೇಶಿಪ್ರೊಡೆ ಪರಿಣತರ್ ಬಹುಮಂದಿ
ಧರ್ಮಿಷ್ಠರೆನಿಸುವರ್ ಸಾಧು ಚರಿತರ್,
ಒರೆದುದನೆ ಮರೆಯುವರ್ ತಾನದನೆಗ್ಗೈವಲ್ಲಿ
ವಾಗ್ ಬ್ರಹ್ಮವಾದಿಗಳ್ ಬೋಧಚತುರರ್

೨೭

ಗಳಿಸಿದರ್ಥಕೆ ಧರ್ಮವಗ್ನಿಯು
ರಾಜ ತಸ್ಕರ ಬಂಧುಗಳ್,
ಹಿರಿಯನಾದನ ಹಳಿವೆಯಾದರೆ
ಮುನಿವರುಳಿದವರೆಲ್ಲರುಂ.

೨೮

ಶೀಲಭಾರದಿಂದ ವನಿತೆ
ಲತೆಯು ಕುಸುಮ ಭಾರದಿಂ,
ಶೋಭಿಸುವುದು ಲೋಕದಲಿ
ಮಾತು ಭಾವ ಭಾರದಿಂ.

೨೯

ಜಿಪುಣ, ಲಕುಮಿ ಕೃಪೆಯ ಪಡೆದು
ಸುಖವನರಿಯ ಲೋಭದಿಂ,
ನೀರಿಗಿಳಿದು ನಾಯಿ ನೀರ
ಜಿಹ್ವೆಯಿಂದ ನೆಕ್ಕುವೊಲ್,

೩೦

ಸಂಕಟದೆ ವೇಂಕಟರಮಣನಂ ನೆನೆಯುವರು
ರೋಗಬರೆ ಬಹುನೇಮ ಜಪತಪಗಳು,
ಧನವಿಲ್ಲದಿರೆ ದಾನಧರ್ಮದೊಳಗಭಿಮಾನ
ಪತಿಭಕ್ತೆಯೆನಿಸುವರ್ ಮುದುಕತನದೆ.

೩೧

ಮದವ ಪುಟ್ಟಿಸದಿರ್ಪ ಸಂಪದಮೆ ಸಂಪದಂ
ಆಸೆಯಂ ತೊರೆದನೇ ಈಶನೆನಿಸಂ,
ವಿಶ್ವಾಸವುಳ್ಳವಂ ನಿಜಗೆಳೆಯನೆನಿಸುವಂ
ಕರಣಗಳ ಗೆದ್ದವಂ ಶರಣನೆನಿಸಂ.

೩೨

ಕೆಲವೊಮ್ಮೆ ಕೋಪಿಷ್ಠ ಕೆಲವೊಮ್ಮೆ ಸಂತುಷ್ಟ
ಕೋಪಿಷ್ಠ ಸಂತುಷ್ಟ ಚಣ ಚಣದೊಳು,
ಲೋಕದೊಳಗನ್ಯವ ಸ್ಥಿತಚಿತ್ತಮಾನವಂ
ಸಂಪ್ರೀತನಾದರುಂ ಕಷ್ಟಮೆನಿಕುಂ.

೩೩

ಅಲಸನಿಗೆ ಸದ್ವಿದ್ಯೆ ವ್ಯಸನಿಯೊಳಗೈಶ್ವರ್ಯ
ಪರಹಸ್ತಗತಳಾದ ಸತಿಯ ಶೀಲಂ,
ಕಳೆ ಪೆರ್ಚಿದೆಡೆಯಲ್ಲಿ ಜೆಳೆಗುಂಟೆ ಗುರುಬಲಂ
ಒಡೆಯನಿಲ್ಲದ ಸೈನ್ಯಗೆಲುವುದುಂಟೆ ?

೩೪

ವಿಷದ ಪಲ್ ಕಳಚಿದರು ಸರ್ಪ ಹೆಡೆ ಬಿರ್ಚುವುದು
ಕರ್ತವ್ಯವಲ್ಲದೊಡೆ ಕಷ್ಟ ಬರ್ಕುಂ
ವಿಷವಿರಲಿ-ಕಳೆದಿರಲಿ ಆರ್ಭಟವ ತೋರದೊಡೆ
ತಲೆಗೊಂದು ಕಲ್ಲೆಸೆದು ಕೊಲ್ವರಲ್ತೆ !

೩೫

ಒಂದೆ ವಸ್ತುವು ಮೂರು ತೆರನಾಗಿ ತೋರುವುದು
ಕಾಣುವರ ಕಣ್ಣುಗಳ ಕಾಣ್ಕೆಯಿಂದ,
ಯೋಗಿವರ ಶವವೆಂದು, ಭೋಗಿ ರಮಣಿಯುಮೆಂದು
ಶುನಕ ಮಾಂಸದ ಮುದ್ದೆಯೆಂದು ಬಗೆವರ್

೩೬

ಪರಪುರುಷರನವರತ ವೀಕ್ಷಿಸುವ ನಾರಿಯರ
ವ್ಯವಹಾರಮರಿಯದಾ ಕವಿಯ ಬಗೆಯು,
ಪಥ್ಯಮಂ ಲೆಕ್ಕಿಸದ ರೋಗಿ ತಥ್ಯವ ಕುರಿತು
ಪರಿಹಾಸಮೆಸಗದವರಾರು ಜಗದೊಳ್.

೩೭

ಬ್ರಹ್ಮವಿದ ತಾನೆಂದು ವಂಚಿಸುತೆ ಜನತೆಯನು
ವಿಷಯಸುಖ ಸಂಸಕ್ತ ಸನ್ಯಾಸಿಯುಂ,
ಉಭಯ ಪದ ಪತಿತನಿವ ವಿಷಬೀಜವೆಂದರಿದು
ಹೊರನೂಂಕು ನೀಚನಂತ್ಯಜನ ತೆರದಿ

೩೮

ಇಲ್ಲ ನವ ಮಾಣಿಕ್ಯ ಶೈಲ ಶೈಲಗಳಲ್ಲಿ
ಇಲ್ಲ ಮೌಕ್ತಿಕಮೆಲ್ಲ ಗಜಗಳಲ್ಲಿ,
ಸಾಧುಗಳು ಬಹಳಿಲ್ಲ ದೇಶದೆಲ್ಲೆಡೆಗಳಲಿ
ಇಲ್ಲ ಚಂದನವೆಲ್ಲ ವನಗಳಲ್ಲಿ.

೩೯

ಸುಖಮಾಗಿ ಜೀವಿಪುದು ಜೀವವಿರುವನ್ನೆಗಂ
ಸೇವಿಪುದು ಸವಿದುಪ್ಪ ಸಾಲಮೆಸಗಿ,
ಬೆಂಕಿಯಿಂ ಬೆಂದೊಡಲು ಬದುಕಿ ಬಠಲುಂಟೇನು?
ಚಾರ್ವಾಕ ಮತವೆ ಚಿರ ಚಾರುತರವೊ ?

೪೦

ಲಕುಮಿ ಸತ್ಯವನರಸಿ ಬರುವಳು
ಜಸವು ಚಾಗವ ಬಯಸುವುದು,
ಬುದ್ಧಿ ಕರ್ಮದ ತೆರವೆ ಬರುವುದು
ಓದು ಸತತಾಭ್ಯಾಸದಿಂ

೪೧

ಯಾರು ಮಕ್ಕಳ ಪಡೆಯೆ ಜೀವನವ ಪುದುವಿಟ್ಟು
ಪಗಲಿರುಳು ಪರಿತಪಿಸಿ ಪೋಷಿಸಿದಳೊ,
ಆ ತಾಯ ಪಾಪಿಗಳು ಪೆಂಡಿರ್ಸ್ಯೆತರೆ ಮನೆಗೆ
ತೃಣದಂತೆ ಕಡೆಗಣಿಸಿ ಕಾಡುತಿಹರು.

೪೨

ದಯೆಯು ಹೃದಯದಿ, ನಿಜವ ನುಡಿಯಲಿ,
ಕಾಯ ಪರಹಿತವೆನಿಸಿರಲ್,
ನ್ಯಾಯ ನಿಷ್ಠುರನಾದರವನಂ
ಕಲಿಯು ಕಾಡನು ಖಂಡಿತಂ.

೪೩

ಯಮರಾಜ ಪೀಡಿತರು, ದೈವಹತಮಾನಸರು,
ಮಹಿತರೆನಿಸಿರ್ದರುಂ ಮಂದಮತಿಗಳ್,
ನಿಮ್ನತೆಯ ನರಸುವಾ ನೀರಿನೊಲು ಬುದ್ಧಿ ಜಲ
ಹರಿಯುವುದು ನೀಚತೆಯ ಕಡೆಗೆ ಬಗೆಯೊಳ್.

೪೪

ಆಯುಸ್ಸು ಐಶ್ವರ್ಯ ಮನೆಯಳುಕು ಹುಳುಕುಗಳ
ಮಂತ್ರವೌಷಧ ದಾನ ಮೈಯ ಸೋಂಕು,
ಮಾನಾಪಮಾನಗಳ ನೊಂಬತ್ತು ಮಾನವಂ
ಮರೆಮಾಚಿ ಲೌಕಿಕವ ನೀಸಬೇಕು.

೪೫

ಬೆಂಕಿಯಲಿ ಬೆಂದದ್ದು ನೀರಿನಲಿ ಮುಳುಗಿದ್ದು
ಕಳ್ಳರಿಂದರಸರಿಂ ಕದ್ದ ಧನಮುಂ,
ಕೆಡು ನುಡಿಯದಿರೆ ಮನುಜ, ಕೃಷ್ಣಾರ್ಪಣಂ ಶುದ್ಧ
ದಾನಮೆಂದೊರೆಯುವರ್ ಬಲ್ಲಮನುಜರ್.

೪೬

ವಿದ್ಯೆಯಿಂದೇನಕ್ಕು ತಪಸಿನಿಂದೇನಕ್ಕು
ಯೋಗದಿಂದೇನಕ್ಕು ಶಾಸ್ತ್ರದಿಂದ,
ಏಕಾಂತದಿಂದೇನು ಮೌನದಿಂದೇನಕ್ಕು
ವಶವಾಗೆ ಮಾನಸಂ ವನಿತೆಯರಿಗೆ.

೪೭

ಲೇಖನ ವ್ಯಾಖ್ಯಾನ ಮಾಡಿಡೊಡೆ ಫಲವೇನು ?
ಪುಸ್ತಕ ಪ್ರಕಟನೆಯ ಗೈದೊಡೇನು ?
ವಿದ್ಯಾರ್ಥಿ ನಿಲಯಗಳ ತೆರೆದೇನು ಫಲಮಕ್ಕು
ವಶಮಾಗೆ ಮಾನಸಂ ವನಿತೆಯರಿಗೆ

೪೮

ಪಲ್ಲಕ್ಕಿಯೊಳು ಕುಳಿತು ಮೆರೆದೇನು ಫಲಮಕ್ಕು ?
ಜಡೆ ಗಡ್ಡಮೀಸೆಗಳ ಬೆಳೆಸಿಯೇನು ?
ಕಾಷಾಯದಿಂದೇನು ವೇಷದಿಂದೇನಕ್ಕು ?
ಚೇತಃ ಕಷಾಯಮಂ ತೊರೆಯದನಕ !

೪೯

ಸ್ನೇಹಮುಂ ಸಂಭ್ರಮವು, ಒಡಲ ವನಭೋಜನವು,
ವಿನಯಶೀಲತೆ ಕುಲವ ವಾಚಿಸುವುದು,
ಮಾತು ದೇಶವಿಭೇದ, ಕೇತು ಪಕ್ಷದ ಪರಿಯ
ನೀತಿ ಜಾತಿಯ ಗುಣವ ಸೂಚಿಸುವುದು.

೫೦

ಸತ್ಪಾತ್ರಕನಿಗಿತ್ತ ವಸ್ತು ಸತ್ಫಲವೀಗು
ಪುಲ್ಲನಿದ ಪಶು ಸುಧೆಯ ಕರೆವ ತೆರದೆ,
ದುಷ್ಪಾತ್ರಕೊಲಿದಿತ್ತ ಸದ್ವಸ್ತುವುಂ ದೂಷ್ಯ
ಪಾಲ್ಸವಿದ ಪಾವ್ ನಂಜನೊಗೆವುದಿಶದೆ.

೫೧

ಅತಿಥಿಗಳು ಬಾಲಕರು ಪೆಂಡಿರುಂ ತಾಯ್ತಂದೆ
ಸಂಸಾರಿಗಿವರಿಷ್ಟೆ ಮುಖ್ಯ ಪೋಷ್ಯರ್,
ಉಳಿದವರುಮವರವರ ಶಕ್ತಿಗನುಗುಣವಾಗಿ
ಪೋಷ್ಯ ವರ್ಗವಸಾರ್ವರೆಂಬರರಿದರ್.

೫೨

ಜೂಜಿನೊಳಗಾಸಕ್ತಿ ಕುಗ್ರಂಥಪಾಠನಂ
ಚಿತ್ರ-ನಾಟಕ-ವಾದ್ಯ ಬೆಸನಮತಿಶಂ,
ನಾರಿಯರ ಸಂಸರ್ಗಮಾಲಸ್ಯ ನಿದ್ರೆಗಳು
ವಿದ್ಯಾಂತರಾಯಗಳು ಮೆಂಬರರಿದರ್.

೫೩.

ವಿನಯವಿಲ್ಲದವಂಗೆ ವಿದ್ಯೆಯಿರ್ದೊಡಮೇನು
ವಿನಯವೇ ಮಾನವನ ಮನದ ಗುಡಿಯು,
ವಿನಯಭೂಷಿತನರನು ಮೌನದಿಂದಿರ್ದೊಡಂ
ಜನತೆಯಲಿ ಗೌರವವ ಪಡೆವನಲ್ತೆ !

೫೪

ಪಕ್ಷಿ ಕುಲದೆ ಕಾಗೆ ನೀಚ
ಪಶುಗಳಲ್ಲಿ ಗಾರ್ದಭಂ,
ಗುಣವನುಳಿದು ಕುಹಕವೆಣಿಪ
ಮನುಜ ನೀಚನಾವಗುಂ.

೫೫

ದಾನ,-ಜೇನುನುಡಿಯು, ಧೈರ್ಯ
ಮುಚಿತವರಿವುದರಿದರೊಳ್,
ಕಲಿಯೆ ಬರುವುವಲ್ಲ ನಾಲ್ಕು
ಮನುಜ ಸಹಜ ಸುಗುಣಗಳ್.

೫೬

ಲೋಭದಿಂ ಪಾಪಗಳು ನೀರಿನಿಂ ರೋಗಗಳು
ಬಯಕೆಯಿಂ ಸಂತಾಪ ಬರ್ಪುದಿಳೆಯೊಳ್,
ಮೂರನಿವ ಗೆದ್ದವಂ ಮಾರಹರನೆನಿಸುವಂ
ಸೊಗದ ಸುಗ್ಗಿಯ ಸೂರೆ ಗೊಂಬನನಿಶಂ.

೫೭

ಚಂದ್ರ ಸಂಜೆಗೆ ದೀಪ ಮುಂಜಾನೆ ರವಿ ದೀಪ
ಸುಜ್ಞಾನವೇ ದೀಪ ಮನುಜಗೆಂದುಂ,
ಸದ್ವಂಶ ದೀಪಕಂ ಸತ್ಪುತ್ರನಾವಗಂ
ಮನೆಗೆ ಮಂಗಳ ದೀಪ ಗೃಹಿಣಿಯಲ್ತೆ !

೫೮

ದೂರದಿಂ ಬೆಟ್ಟಗಳು ರಮ್ಯತರಮೆನಿಸುವವು
ಮುಖಮುಂಡನದೆ ವೇಶ್ಯೆ ರಮ್ಯಳೆನಿಪಳ್,
ಸಮರವಾರ್ತೆಯು ರಮ್ಯಚಾರರಿಂದಾಲಿಸಲು
ದೂರದಿಂದಿಪ್ಪ ಮೂರು ರಮ್ಯಮಿಳೆಯೊಳ್.

೫೯

ತಾಯಿ ಸುತಗೆ ವಿಷವನುಣಿಸೆ
ತಂದೆ ಮಗನ ಮಾರಲು,
ಅರಸ ಮುಳಿದು ಸಿರಿಯ ಸೆಳೆಯೆ
ದೂರನೊಯ್ಯುದೆಲ್ಲಿಗೆ ?

೬೦

ಸುಖವ ಬಯಸುವ ಮನುಜ ವಿದ್ಯೆಯಂ ಬಿಡಬೇಕು
ವಿದ್ಯೆ ಬಯಸುವಗುಂಟೆ ಸೊಗದ ಸುಳಿವು ?
ವಿದ್ಯಾರ್ಥಿಗಿಲ್ಲ ಸುಖ ಸೌಖ್ಯಾರ್ಥಿಗಿಲ್ಲರಿವು
ಅರ್ಥವನಾರ್ಜಿಸಿ ಸುಖಿಪರಿವರಿಳೆಯೊಳ್.

೬೧

ಅನ್ನದಾನವು ಮೇಲು ಎಲ್ಲದಾನಗಳೊಳಗೆ
ಜ್ಞಾನದಾನವುಮಧಿಕಮೆಂಬರದಕಿಂ,
ಅನ್ನದಿಂ ಕ್ಷಣಿಕ ಸುಖಮಾಜೀವ ವಿದ್ಯೆಯಿಂ
ದದರಿಂದಮಿವನೆಸಗಿ ಸುಖಿಸರರಿದರ್.

೬೨

ಮನವೆಂಬ ಮರ್ಕಟಂ ಪರಿವುದೆಲ್ಲೆಡೆಗಳಲಿ
ಮದ್ದಾನೆಯಂತದಂ ಪಿಡಿವರಾರು ?
ಅಂಕುಶದೆ ಮದ್ದಾನೆ ಪಳಗಿಸುವ ತೆರನಂತೆ
ಬುದ್ಧಿಯಿಂ ತಿರ್ದುವುದು ಮನವನಿರದೆ

೬೩

ತಿಳಿದವಗೆ ತಿಳಿಯದಗೆ ದುರ್ಬಲಗೆ ದುರ್ಜನಕೆ
ಬಡವ ಬಲ್ಲಿದರೆಂಬ ಭೇದವಳಿದು,
ಮರಣಮೊಲಿದೆರಗುವುದು ಸರ್ವರಿಗು ಸಮವಾಗಿ
ಸಮತೆಯಲಿ ಮರಣಮಂ ಮೀರ್ವರುಂಟೆ ?

೬೪

ದುರ್ಜನರ ಸಂಪದಕೆ ದುರ್ಗತಿಯೆ ತುದಿಯಕ್ಕು
ಸುಜನಕೊದಗಿದ ವಿಪದ ಸುಖದ ನಾಂದಿ,
ಚೌತಿಚಂದ್ರನ ತೆರದಿ ಪರಸತಿಗೆ ಕಣ್ಣಿಡದ
ಸುವ್ರತಿಗೆ ಶಿವಸುಖಗಳೆಲ್ಲ ಬಂದಿ.

೬೫

ತಮವುಂಡ ದೀಪಶಿಖೆ ಕಾಡಿಗೆಯನುಗುಳುವುದು
ಅನ್ನಕನುಗುಣಮೆನಿಪುದವನ ಮನವು,
ತಾಯಿಯಂದದಿ ಮಗಳು ನೂಲಿನಂಪದಿ ಶಾಲೆ
ಕಾರ್ಯಕಾರಣ ಜಾಲ ಶಿವನ ಲೀಲೆ,

೭೬

ಅರಿವೆಯಾಡಂಬರಕೆ ಮರುಳಾಗ ಬೇಡೆಲವೊ
ಅರಿವಿನಾಳವ ತಿಳಿಸು ಮಣಿಯೊ ಸಡಕೆ,
ಜೈಲಬಟ್ಟೆಯನುಟ್ಟು ತಿರಿದುಂಬ ಶಂಭುವಂ
ಸರ್ವಜ್ಞನೆಂದೆಲ್ಲ ಭಜಿಪುರದಕೆ.

೭೭

ದೋಷಮೋ ಗುಣಮಕ್ಕು ಒಡೆಯನೊಲುಮೆಯು ಬರಲು
ಅರುಣ ರವಿಸಾರಥ್ಯಕೇರಿದಂತೆ,
ಒಲ್ಲದಿಹ ಗಂಡನಿಗೆ ಕೆನೆಮೊಸರಿನಲಿ ಕಲ್ಲು
ಒಲಿದವಗೆ ಕಾಳಿಯುಂ ಕಮಲೆ ವಿಮಲೆ.

೭೮

ಸಾಮದಿಂದೊಲಿಯುವರ್ಲೋಕದೊಳಗುತ್ತಮರ್
ಭೇದದಿಂ ಶೂರರಂ ಗೆಲ್ಲಲಕ್ಕುಂ,
ಲಘುದಾನದಿಂದಧಮ ವಶವರ್ತಿಯೆನಿಸುವಂ
ಧರ್ಮದಿಂದಿಷ್ಟಜನವೊಲಿವುದನಿಶಂ

೭೯

ಏಳಿಗೆಯು ದುರ್ಜನಕೆ ದೊಡಮೊದಲೆ ಮೊಳೆಯುವುದು
ಮುನ್ನಂದೆ ಮಂಗಳಗಳೊಲಿದು ಬರ್ಕುಂ,
ಶತ್ರುಜಯ ಸಂಪದಂ ಸೌಭಾಗ್ಯ ಸಮನಿಕುಂ
ಕಡೆಗೆಲ್ಲ ಬರಿದಕ್ಕು ಬೂದಿಯಕ್ಕುಂ

೮೦

ದಿಟವ ನುಡಿ ಹಿತವ ನುಡಿ
ಹಿತವಲ್ಲದಿಹ ದಿಟವ ನುಡಿಯು ಬೇಡ !
ಹಿತವೆಂದು ಸಟೆಯನುಂ
ನುಡಿಯದಿರ್ಪುದೆ ಧರ್ಮದಿರವ್ರ ನೋಡ !

೭೧

ಅಪ್ಪಣೆಯ ಮೀರುವುದು ಮಾನಭಂಗ ನೃಪವರಗೆ
ಮಾನವಂ ಮುರಿಯುವುದು ವಿಪ್ರಗೆದುರೊಳ್,
ಹಾಸಿಗೆಯ ಬದಲಿಪುದು ಪತಿನಿಷ್ಠೆ ಮಾನಿನಿಗೆ
ಶಸ್ತ್ರವಿಲ್ಲದ ಶಿಕ್ಷೆಯೆನಿಪುದಿಳೆಯೊಳ್

೭೨

ಹಣವಿಲ್ಲದವ ದುಃಖಿ ಲೋಕದೊಳಗಾವಗುಂ
ಬಹುದುಃಖಿಯೆನಿಸುಗುಂ ಸಾಲಗಾರಂ,
ಈರ್ವರಿಂದತಿದುಃಖಿ ಬೇನೆಯಲಿ ಬಳಲುವಂ
ಕುಮತಿಸತಿಯುತನಳಲನಳೆವನಾವಂ ?

೭೩

ಸಮಯಕ್ಕೆ ತಕ್ಕ ನುಡಿ ಬಯಕೆಯರಿದುಪಕೃತಿಯು
ತನ್ನಳವನರಿದೆಸೆವ ಕೋಪದೀಪಂ,
ಮನ್ನಣೆಯನಾಂತಪುದು ಮಾನ್ಯರೊಳಗನವರತ
ನನ್ನಿಯಿಂ ಬೆಳಗುವುದು ಗಳಿತತಾಪಂ

೭೪

ಸರಸತಿಯು ತಾಯಂತೆ
ಪರರೊಡವೆ ಮಣ್ಣಿನ ಮುದ್ದೆಯಂತೆ,
ಎಲ್ಲರಂ ತನ್ನಂತೆ
ಬಲ್ಲವಂ ನಿಜಯೋಗ ಸಿದ್ಧನಂತೆ

೭೫

ಗೂಗೆ ಪಗಲಲಿ ಕುರುಡು ಕಾಗೆ ನಿಶೆಯಲಿ ಕುರುಡು
ಪಗಲಿರುಳು ಕಾಮುಕಂ ಹುಟ್ಟು ಕುರುಡಂ,
ಯೋಗಿವರನಾದರುಂ ವಿಷಯಗಳಿಗಳುಕಿದೊಡೆ
ಕಣ್ಣಿರ್ದರುಂ ಕುಮತಿಯುಚ್ಚ ಕುರುಡಂ

೭೬

ಸಂಗೀತ ಸತ್ಸಂಗ ಸಿರಿಗಂಧ ತಾಂಬೂಲ
ನಲ್ನೀರೆ ಗೆಳೆಯರುಂ ಬಾಲಜನಂ,
ದಿನದಿನಂ ಸೇವಿಸಲು ಪೊಸತೆನಿಸಿ ರುಚಿಸುಗುಂ
ಸರಗಿಸರ ಸಾಂಗತ್ಯ ಚಿರನೂತನಂ.

೭೭

ಎದುರಿನಲಿ ಹೊಗಳುವುದು ಗುರುಹಿರಿಯರಂ ಮುಸಡೆ
ಮರೆಯಲ್ಲಿ ಗೆಳೆಯರಂ ಬಂಧುಜನಮಂ,
ಹೊಗಳುವುದು ಸೇವಕರ ಕೆಲಸ ಕಡೆಯಾಂತೊಡನೆ
ಹೊಗಳದಿರು ಸತಿಸುತರ ಮರೆದೆಂದಿಗುಂ

೭೮

ಸಾಲವೆಸಗಿದ ತಂದೆ ಶೀಲವಿಲ್ಲದ ತಾಯಿ
ಲೀಲೆಯಿಂ ವಂಚಿಸುವ ಮಡದಿ ನಿಜದಿಂ,
ಬಾಲ್ಯದಲಿ ವಿದ್ಯೆಯಂ ಗಳಿಸದವಿವೇಕದಿಂ
ಕಾಲ ಕಳೆಯುವ ಪುತ್ರ ಶತ್ರುವನಿಶಂ.

೭೯

ವಿದ್ಯೆ ದಾರಿಯಗೆಳೆಯ ಮಡದಿ ಮನೆಯಲಿ ಗೆಳತಿ
ಜೇನೆಯಿಂ ಬಳಲುವಗೆ ಮದ್ದುಗೆಳೆಯಂ,
ಸತ್ತವಗೆ ಧರ್ಮವೇ ಗೆಳೆಯು ಪರಲೋಕದಲಿ
ಧರ್ಮದಿಂ ತೆಗೆ ನಿತ್ಯಸುಖದ ಬೆಳೆಯಂ

೮೦

ಬುವಿ ಸತ್ಯದಿಂದಿಹುದು ರವಿ ಸತ್ಯದಿಂದುರಿವ
ಸತ್ಯದಿಂ ಗಾಳಿಯಿದು ಸುಳಿವುದನಿಶಂ,
ಸತ್ಯದಿಂ ಗ್ರಹಚಕ್ರ ತಿರುಗುತಿದೆ ಗಗನದಲಿ
ಸತ್ಯದೊಳಗೆಲ್ಲವುಂ ಬೆಸೆದುದನಿಶಂ,

೮೧

ಕೈಗೆ ಸಿಂಗರ ದಾನ ಮುಖಕೆ ಸಿಂಗರ ಸತ್ಯ
ಕಿವಿಗೆ ಸಿಂಗರ ಶಾಸ್ತ್ರಮವನಿತಲದೊಳ್
ಸತಿಗೆ ಸಿಂಗರ ಶೀಲ ಸುತಗೆ ಸಿಂಗರ ವಿನಯ
ಯತಿಗೆ ಸಿಂಗರ ವಿರತಿ ವಿಬುಧವರರೊಳ್

೮೨

ಅಪಮಾನವಾದೊಡಂ ಮಾನಮಂ ಬದಿಗಿಟ್ಟು
ಕಾರ್ಯಸಾಧಿಪ ಮನುಜ ಜಾಣನೆನಿಪಂ ;
ಅಪಮಾನಮೆಂದಳುಕಿ ಮಾನಮಂ ಮುಂದಿಟ್ಟು
ಕಾರ್ಯಹಾನಿಯಗೈವನಧಮನೆನಿಪಂ

೮೩

ಕಾಲವು ಬರೆದಿರೆ ನೂರಾರ್ ಶರಗಳು
ಕವಿಪರು ನರಗಿಲ್ಲ ಸಾವು,
ಒದಗಿರೆ ಕಾಲವು ಪುಲ್ಲೆಳೆ ಸಾಲದೆ
ಕೊಲ್ಲಲು ವಿಧಿಗಿಲ್ಲ ನೋವು.

೮೪

ಮುನ್ನೀರ ಮುಳುಗಿದರು ಮೇರುವಿಂದುರುಳಿದರು
ತಕ್ಷಕಂ ಬಿಗಿದಪ್ಪಿ ಕಚ್ಚುತಿರಲು,
ತೀರದಿರಲಾಯುಷ್ಯಮೊದಗುವುದು ರಕ್ಷೆ ತಾಂ
ವಿಧಿವಿಲಾಸಸೊಳಿರುವುದಿದುವೆ ತಿರುಳು.

೮೫

ಋಷಿಯಲ್ಲದವನೆಂತು ಕಬ್ಬಮಂ ಕಟ್ಟುವನು ?
ರುದ್ರಗಲ್ಲದೆ ವೇದ ವೊಲಿವುದುಂಟೆ ?
ದೇವಾಂಶವಿಲ್ಲದವನೆಂತನ್ನ ನೀಡುವನು ?
ವಿಷ್ಣುವಲ್ಲದೆ ಪೊಡವಿಯಾಳ್ವುದೆಂತು ?

೮೬

ಕವಿಯು ಕಾಣದುದೇನು, ಕಾಗೆ ತಿನ್ನದುದೇನು ?
ಕುಡುಕನಾಡದುದೇನು, ಪಾನವೇನು ?
ನೀರೆಯೆಸಗದ ಕಜ್ಜವೇನುಂಟು ಲೋಕದಲಿ ?
ನಾಕ-ನರಕದ ದಾರಿ ನಾರಿಯಲ್ತೆ !

೮೭

ಪಕ್ಷಿಯೊಲು ವನಿತೆಯಂ ರಕ್ಷಿಪುದು ಮಾನವಂ
ವನಿತೆ ಗೃಹಸೌಭಾಗ್ಯ ಕನಕಕಲಶಂ,
ನಶಿಸಿದೊಡೆ ಕುಲವೃದ್ಧಿಸಂಕ್ಷಯವನೆಯ್ದುವುದು
ಪೆರ್ಚಿದೊಡೆ ಕಿರ್ಚಿನೊಲು ಸುಡುವುದನಿಶಂ

೮೮

ಸ್ಥಿರಮಲ್ಲ ಜೀವನಂ ಸ್ಥಿರಮಲ್ಲ ಯೌವನಂ
ಸ್ಥಿರಮಲ್ಲ ಧನಧಾನ್ಯ ಸಂಪದಂಗಳ್,
ಮಡದಿ ಮಕ್ಕಳುವೊಂದು ಸ್ಥಿರಮಲ್ಲ ಲೋಕದಲಿ
ಧರ್ಮಕೀರ್ತಿಗಳೆರಡೆ ಸುಸ್ಥಿರಂಗಳ್.

೮೯

ಬೆನಕನಾದರು ಭಜಿಪ ಮಾರ್ಜಾಲವೇಷನಂ
ತನ್ನ ವಾಹನ ರಕ್ಷೆ ದೊರೆಯಲೆಂದು,
ಸಂದರ್ಭವೊದಗಿ ಬರೆ ದೊರೆ ಸಿಂಹಪೀಠದಿಂ
ನೀಚಸೇವೆಯ ನೆಸಪ ನಿಳಿದು ಬಂದು.

೯೦

ಕೋಪ ಕೇಡಿನ ತವರು ಕೋಪ ಸೇಡಿನ ಶಿಬಿರಂ
ಕೋಪದಿಂ ಸಂಸಾರ ಬಂಧಮನಿಶಂ,
ಧರ್ಮನಾಶಕನೆನಿಪ ಕೋಪಮಂ ಕಿತ್ತೆಸೆದು
ಶಾಂತಿಸುಧೆ ಸೇವಿಸಂ ದೇವಸದೃಶಂ

೯೧

ಜೇವುಸಸಿ ಪಾತಿಯಲಿ ಜೇನೆರೆಯೆ ಸಿಹಿಯಹುದೆ
ಹುಟ್ಟುಗುಣ ವಳಿಯುವುದೆ ನಿಷ್ಠೆಬಲಿಯೆ ?
ಹಸಿವೆಂದು ಪುಲಿ ಪುಲ್ಲಮೇಯುವುದೆ ಲೋಕದಲಿ
ನಿಷ್ಠೆಗೆಡನುತ್ತಮಂ ಕಷ್ಟ ಬೆಳೆಯೆ.

೯೨

ಬಂಗ್ಬೆಯಳ್ಕೆದಿರು ಗುರುದೇವತಾಲಯವ
ಮಡದಿ ಮಕ್ಕಳು-ಮಿತ್ರ ಬಂಧುಜನಮಂ,
ರಾಜಗೃಹ ಕ್ಷೇತ್ರಗಳ ಶಿವಯಾಗಮಂಟಪವ
ನಿಜಯೋಗವೃದ್ಧಿಯಂ ಬಯಸಿ ಮನುಜಂ

೯೩

ಧನವ ನೀಂ ರಕ್ಷಿಪುದುಮಾಪದಕೆ ನೆರವಾಗೆ
ಧನದಿಂದ ಕುಲವಧುವ ಪೊರೆವುದನಿಶಂ
ವಧು-ಧನಗಳೆರಡರಿಂದಾತ್ಮರಕ್ಷಣೆಯೆಸಗು
ಆತ್ಮರಕ್ಷಣೆಗಧಿಕ ವಿಲ್ಲವದರಿಂ.

೯೪

ಪೆಣ್ಣು ತುಪ್ಪದ ಗಡಿಗೆ, ಗಂಡು ಬೆಂಕಿಯ ಕೆಂಡ,
ಬಣ್ಣ ಗೆಡುವುದು ಸಹಜ ಬಳಿಯೊಳಿರಲು,
ಮಣ್ಣು ಗೂಡುವ ಮೊದಲೆ ಮನುಧರ್ಮನೀತಿಗಳು
ಕಣ್ಣ ತಪ್ಪಿಸಿ ದೂರವಿರಿಸೊ ಮೂಢ !

೯೫

ತರುಗಳಿಗೆ ಬಿರುಗಾಳಿ, ತಾವರೆಗೆ ಹೇಮಂತ
ಗಿರಿಕುಲಕೆ ವಜ್ರ ಭಯಮನವರತವು,
ಕಲಿವೃಂದ ಕೇಸರಿಗೆ, ಸಜ್ಜನರ್ ದುರ್ಜನಕೆ,
ಧರೆಯೊಳರಿಯೆ ಬೆದರುವುದು ಸಹಜಮಲ್ತೆ !

೯೬

ಇಂದ್ರಿಯಗಳಡಿಯಪ್ಪುವಾಪದಗಳಾಗರಂ
ಸಂಯಮಕೆ ಸಂಪದಗಳೊಲಿವುವಿಳೆಯೊಳ್,
ಇಂದ್ರಿಯಗಳಡಿಯಾಳೊ, ಸಂಯಮದ ಕಡುಗಲಿಯೊ
ಮನವೊಲಿದ ಮಾರ್ಗದಲಿ ನಡೆಯೊ ಮನುಜ !

೯೭

ಕಳ್ಳಗೆಲ್ಲಿಯ ಧರ್ಮ, ದುರ್ಜನಕೆ ಕ್ಷಮೆಯುಂಟೆ ?
ಗಣಿಕೆಯಲಿ ಗೆಳೆತನದ ಹುಡುಕಲೇಕೆ ?
ಕಳ್ಗುಡುಕ-ಕಾಮಿಯೊಳು ಸದ್ಗುಣವ ಬಯಸುವುದು
ಹಳ್ಳುರಿಯ ಬಳಿ ತಣ್ಪ ಬಯಸಿದಂತೆ.

೯೮

ಭಾರವೇಂ ಶಕ್ತನಿಗೆ ದೂರವೇಂ ನಡೆಯುವಗೆ
ಬೇರೆ ದೇಶದ ಹಂಗು ವಿಬುಧಗುಂಟೆ ?
ಚಾರುಭಾಷಿಗೆ ಹಿತವ ಬಯಸದವರಾರುಂಟು
ಮಾರನುಪಟಳಕುಂಟೆ ಮರ್ದು ಜಗದಿ ?

೯೯

ಸಾರಜ್ಞ ಮಾನಸದೆ ಯೋಚಿಸಿದ ಕಜ್ಜಮಂ
ತೋರ ನೆಂದಿಗು ನುಡಿದು ಮಾತಿನಲ್ಲಿ ;
ಬೇರೆಯರು ಕಣ್ಣಿಟ್ಟ ಕೆಲಸಗಳು ಲೋಕದಲಿ
ದಾರಿಗೆಡುವವು ಮನುಜನೀತಿಯಲ್ಲಿ.

೧೦೦

ಕಳೆದುದಕೆ ಕರುಬದೆಯೆ ಬರ್ಪುದಂ ಬಗೆಯದೆಯೆ
ಮುಪ್ಪಿನೊಳು ನವವಧುವ ಬಯಸದೆಂದುಂ
ವರ್ತಮಾನವನರಿದು ಸಮಯೋಚಿತಂ ಚರಿಪ
ಮಾನವಂ ಕಡು ಜಾಣನೆನಿಪನಿಂದುಂ.

ತೃತೀಯ ಶತಕಂ

## ಎಸಳು ೪

೧

ಪರಿಣಯದ ಸಮಯದಲಿ ಗಿರಿಜೆ ಪದ ಪಂಕಜವ
ಕರಕಮಲದಿಂ ಕಲ್ಲನೇರಿಪಲ್ಲಿ,
ಪರಿಹಾಸಮೆನಲೆಸೆಪ ಪುರಹರನ ಪುಸಿನಗೆಯು
ದುರಿತಮುಂ ಪರಿಹರಿಸಿ ಹರಸಲೆಮ್ಮಂ.

೨

ಬರವುಂಟೆ ರೈತನಿಗೆ ಬೆವರಿಟ್ಟು ದುಡಿವಲ್ಲಿ
ನೀರೋಗಿ ನರಗುಂಟೆ ದುಗುಡಮಿನಿಸುಂ ?
ಸತಿಪತಿಗಳೊಂದಾಗಿ ನಲ್ಮೆಯಿಂ ನಲಿವಲ್ಲಿ
ಮರ್ತ್ಯಮೇ ನಂದನೋದ್ಯಾನಮೆನಿಕುಂ !

೩

ನಶಿಸುವುವು ಕಷ್ಟಗಳು ಲೀಲೆಯಿಂ ನಲಿವಲ್ಲಿ
ದಾರಿದ್ರ್ಯದಿಂ ಬುದ್ಧಿ ಕೆಡುವುದೆಂದುಂ,
ನಶಿಸುವುದು ಹಿರಿಯತನ ಯಾಚನೆಗೆ ಕೈಚಾಚೆ
ಕುಲಗೌರವಂ ಕೆಡುವುದನ್ನದಿಂದಂ.

೪

ಕಷ್ಟದಿಂದೆಳೆತನದೆ ವಿದ್ಯೆಯಂ ಗಳಿಸದಿರೆ
ಯೌವನದೆ ವಿತ್ತಮಂ ಗಳಿಸದಿಳೆಯೊಳ್,
ಕೌಮಾರದೊಳು ಪುಣ್ಯಸಂಚಯವ ನೆಸಗದಿರೆ
ಮುಪ್ಪಿನೊಳಗೇಂ ಗೈವ ಮನುಜನಿಳೆಯೊಳ್,

೫

ಎಗ್ಗನಿಗೆ ಮನ್ನಣೆಯು ವಿದ್ವಾಂಸರಿರದಲ್ಲಿ
ಮರವಿಲ್ಲದೆಡೆಯೌಡ್ಲ ಗಿಡವೆ ಮರವು,
ಕೆಣಕಿದಡೆ ಕೆಡುವುದೇ ಸಾಧುಜನಮಾನಸಂ
ಪುಲ್‌ಬೆಂಕಿ ಕಾಯ್ಸುವುದೆ ಕಡಲ ಜಲಮಂ ?

೬

ಕುಡಿಯದುದ ಕುಡಿಯುವುದು ತಿನ್ನದುದ ತಿನ್ನುವುದು
ಮಾಡದುದ ಮಾಡುವುದ ತೋರಿದ ನರನು,
ಮೂಲೋಕ ಪೂಜಿತಂ ಮನುವಂಶದೀಪಕಂ
ಶರಣಜನ ಮಾನಸನ ಮರೆವರಾರು ?

೭

ಮುಪ್ಪುಸಾವುಗಳಿಲ್ಲವೆನಗೆಂದು ದಿನ ದಿನಂ
ಗಳಿಸುವುದು ವಿದ್ಯೆಯಂ ಧನಮನನಿಶಂ,
ಮೃತ್ಯು ಬೆನ್ನಟ್ಟುತಿದೆಯೆಂದರಿದು ಮರೆಯದೆಯೆ
ದಾನ-ಧರ್ಮದೆ ಸವೆಸಿ ಧನ್ಯನೆನಿಸು.

೮

ವಿಧಿ ಜನ್ಮಕೊಡುವಂದೆ ನಿಯಮಿಪಂ ನರಗಿನಿತು
ವಿದ್ಯೆ-ವಿತ್ತವು-ಕರ್ಮ-ನಿಧನವಾಯು,
ವೆಂದು ವಿಧಿಯನು ನಂಬಿ ಕೂಡದಿರು ಮೂಢಾತ್ಮ !
ಪೌರುಷವ ಮರೆದು ಸವಿ ಸಗ್ಗ ಸೊದೆಯ.

೯

ದುಷ್ಟ ಸಂಸರ್ಗದಿಂ ಸುಜನ ದುರ್ಜನ ನಪ್ಪ
ವಿಷಸಂಗದಿಂದಮೃತ ಕೊಲ್ವುದಿರದೆ,
ವಿಫಲವಮದ್ರವ್ಯದೊಳಗೆಸೆಪೆಲ್ಲವುಜ್ಜುಗಂ
ಬಕಕೋಂದ ಕಲಿಸುವರೆ ಶುಕದ ತೆರದೆ !

೧೦

ಎಡರುಗಳು ಹಲವಾರು ತೊಡರುಗಳು ನೂರಾರು
ಕಾಡಿಸುವುವನವರತ ಮೂಢಾತ್ಮರಂ,
ತಿಳಿವುಳ್ಳ ಜಾಣರಂ ಕಂಡೆಲ್ಲ ಕರಗುವುವು
ಬೆಳಕಿನೆದುರೊಳು ತಮವು ಕರಗುವಂತೆ.

೧೧

ಪ್ರಾಣದೊಳು ತನಗೆನಿತು ಮಮಕಾರಮಂತಂತೆ
ಪ್ರಾಣಿಕೋಟಿಗೆ ಮಮತೆಯೆಂದು ವಿಬುಧರ್,
ಮಾಣದೆಯೆ ತಮ್ಮಂತೆ ದಯೆತೋರಿ ಮುದದಿಂದೆ
ಪ್ರಾಣಿಗಳ ಸಲಹುವರು ಸಾಧುಚರಿತರ್.

೧೨

ಕ್ರೋಧ-ಭಯವತಿನಿದ್ರೆ-ತೂಕಡಿಕೆಯಾಲಸ್ಯ
ಮುಂದಗತಿ ಕೆಲಸದೊಳಗೆಂಬುವಾರು,
ದೋಷಗಳ ಬದಿಗಿಟ್ಟು ಪಾವರಸದಂದದಲಿ
ನುಗ್ಗಿ ನಿನ್ನೆಸಕದಲಿ ಸೊಗದ ಬೀರು.

೧೩

ಶಾಸ್ತ್ರದಲ್ಲಿ ಬಲ್ಲಿದರು ಶಸ್ತ್ರದಲಿ ಪರಿಣತರು
ಸಂಶಯಾದ್ರಿಗೆ ವಜ್ರ ಕೈದೆನಿಸಿಯುಂ,
ಗೌರವವನಾಂತವರು ದುಃಖಾಬ್ಧಿಯೊಳು ಮುಳುಗಿ
ದಣಿಯುವರು ಪಡಗಾಣದತ್ಯಾಸೆಯಿಂ.

೧೪

ತಾಯ್ತಂದೆ ಗೆಳೆಯರೆಂಬೀ ಮೂರು ಮೂರ್ತಿಗಳೆ
ಮಾನವಗೆ ನಿಜವಾದ ಹಿತಚಿಂತಕರ್,
ಉಳಿದವರು ವೊಂದೊಂದು ನೆವದಿಂದೆ ಮಾನವನ
ಜೀವನದೊಳೆನಿಸುವರ್ ಹಿತಚಿಂತಕರ್

೧೫

ಬಗೆಯದಿರು ಕೇಲವಂ ಜಾತಿಯೋ ಮಾನವನ
ಹಗೆತನಕೆ-ಗೆಳೆತನಕೆ ಹಾದಿಯೆಂದು,
ಬಿದಿರಿನಿಂದೊಗೆದಗ್ನಿ ಕಾಡೆಲ್ಲ ಸುಡುತಿರಲು
ನಂದಿಸುವುದದ ಮೇಘ ವೃಂದ ಬಂದು.

೧೬

ಬಂದವರನುಪಚರಿಸೆ ಸತ್ಪುರುಷರಾಲಯದೆ
ಸೊಳ್ನುಡಿಯೆ ಹುಲ್ಲುನೀರ್ನೆಲವೆ ಚೆಲುವು,
ಪುಷ್ಕಳಂ ದೊರೆಕೊಳ್ವುವೊಲವಿಂದ ಕೆಲವೊಮ್ಮೆ
ಮಿಕ್ಕವುಗಳಲಿ ಲೋಪ ಬರಲು ಕೆಲವು.

೧೭

ನನ್ನೊಳಗೆ ತಪ್ಪಿಲ್ಲವೆನ್ನನಾರ್ ಪೀಡಿಸರು
ಎಂದು ನಂಬುವೆಯೇಕೆ ಮೂಢ ಮನುಜ !
ಎಳೆಹುಲ್ಲ ಮೇವುಂಡು ಕಾಡಿನಲಿ ಹುದುಗಿರುವ
ಹುಲ್ಲೆಗಳ ಕೊಲ್ಲನೇಂ ಹೀನ ಮನುಜಂ !

೧೮

ಕರಗಿಸಲು ಲೋಹಗಳು, ಭಯದಿಂದ ಮೃಗಪಕ್ಷಿ
ಲೋಭದಿಂ ಮೂಢಜನ ಬೆರೆವರಿಳೆಯೊಳ್,
ದರ್ಶನದೆ ಕೇಲವಂ ಸಜ್ಜನರ ಕೆಳೆಬೆಳೆದು
ಕಷ್ಟದೊಳಗನಿಮಿತ್ತ ಬಂಧುವೆನಿಸರ್.

೧೯

ನೀರೊ ಬೆಂಕಿಯೊ ವಿಷನೊ ಶಸ್ತ್ರ ಕ್ಷುತ್ ವ್ಯಾಧಿಯೊ
ಕಾರು-ಲಾರಿಯೊ ಹರಿದು ಕಾಲುಜಾರಿ,
ಕಾರಣಮದಾವುದೊ ಸಾಯ್ವುದಕೆ ಜೀವನದೆ
ನೆಪಬೇಕು ಸಾವಿಗಿದು ಕಾಲುದಾರಿ !

೨೦

ಎಡರಡಸೆ ಪಂಡಿತಂ ಕಾರಣವ ಕಂಡರಿದು
ಸಿಡಿದೆದ್ದು ಹಿಂದಿರುಗಿ ಜಡಿಯದಿರಲು,
ಜಡಸರ್ಪಮಂ ಪಿಡಿದು ನಾಡಜನ ಬಡಿಯುವೊಲು
ಕಡೆತನಕ ಪೀಡಿಸುವುವೆಡರ ಸಾಲು ;

೨೧

ಕಳೆದುದಕೆ ಚಿಂತಿಸರು, ದೊರೆಯದುದಕಾಶಿಸರು,
ತಿಳಿವುಳ್ಳ ವಿಬುಧರಾಪತ್ತಿನಲ್ಲಿ,
ಕಳೆಗುಂದರೆಂದಿಗುಂ ಮೂಢಜನರಂದದಲಿ
ತಳೆವರುರು ಧೈರ್ಯಮಂ ಶೈಲದಂತೆ.

೨೨

ಒಂದ ಸುಖಮೆಂತಂತು ದುಃಖಮಂ ಸೇವಿಸುವು
ದೆಂದಿಗುಂ ಸ್ಥಿರಮಲ್ತು ಜೀವಿಗಿವುಗಳ್,
ಸಂಧಿಸುವುವನವರತ ಬೆಳಕು ಕತ್ತಲೆಯಂತೆ
ಒಂದಾದ ಮೇಲೊಂದು ಕವಿವುವಲ್ತೆ !

೨೩

ಬದುಕಲೇಂ ಬೆದರುವೆಯೊ ಬಡಜೀವ ! ಬಿದಿ ಮೊದಲೆ
ಬದುಕ ಬೆದಕಿಯೆ ನಿನ್ನ ಬುವಿಗಟ್ಟಿದಂ ;
ಪಾಲ ತಾಯ್ಮೊಲೆಯೊಳಗೆ ಪುದುವಿಟ್ಟ ವಿಧಿ ; ನಿನಗೆ
ಬದುಕನೇನೊದಗಿಸನೆ ದುಡಿಮೆ ಗಲಿಯೆ ?

೨೪

ಅರಸಂಚೆಯೊಳು ಬಿಳುಪು, ಗಿಳಿಯ ಮೈಯೊಳು ಪಸುರು
ಪರಿಪರಿಯ ಬಣ್ಣಗಳ ನವಿಲ ಗರಿಯೊಳ್,
ವಿರಚಿಸಿದ ನಾವನವನೀಯನೇಂ ಜೀವನವ ?
ಪರಿತಪಿಸದಿರು ; ದುಡಿಮೆಯೆಸಗಲಿಳೆಯೊಳ್,

೨೫

ದೀನಯಾಚನೆ ಗೈದು ದಾನಮಾಳ್ಪುದಕಿಂತ
ಮೌನದಿಂದಿರುವುದೇ ಮಾನಿಗೊಳಿತು,
ಹಾಳು ಕೆಸರೊಳಗಿಳಿದು ಕಾಲು ತೊಳೆವುದಕಿಂತ
ಹಾನಿಯೇಂ, ದೂರವಿರೆ ಮನುಜಗಿನಿತು.

೨೬

ನಿಜವಲ್ಲವೀವೊಡಲು ರೋಗರುಜಿನದ ತವರು
ನಿಜವೆ ಸಂಪದವೆನಿತು ಎಡರು ತೊಡರು ?
ಗಜಿಬಿಜಿಯ ಸಂಸಾರ ನೆಚ್ಚಲೇತಕೆ ಮನುಜ !
ನಿಜದ ನೆಲೆ ತೋರುವನ ಪದವನಡರು.

೨೭

ದೊರೆಯದುದ ಯತ್ನದಿಂದಾರ್ಜಿಸುವುದನವರತ
ದೊರೆತುದಂ ರಕ್ಷಿಸುವುದೆಚ್ಚರಿಂದಂ,
ತಿರೆಯೊಳಗೆ ರಕ್ಷಿತವ ವರ್ಧಿಸಿದ ಜಾಣ ನೀಂ
ಮರೆಯದೆಯೆ ಧರ್ಮಕದ ನೀಡು ಮುದದಿಂ.

೨೮

ನೋಡುವೊಡೆ ಕಿರಿಯರಂ ತಾನೆ ಹಿರಿಯನುವೆನಿಪ
ನೋಡಿದೊಡೆ ಪಿರಿಯರಂ ತಾನೆ ಕಿರಿಯಂ,
ಕಾಡು ಗಿಡಗಳ ನೋಡಿ ಬೀಗ ಬೇಡೆಲೆ ತಾಳೆ !
ನೋಡಿಯಡಕೆಯ ಮರವ ತಾಳಿ ಬಾಳು.

೨೯

ನಾಡೆ ನೀಂ ಧನಿಕನ್ನೆ ಹೀನಧನರೆಡೆಯಲ್ಲಿ
ನೋಡಿದೊಡೆ ಧನಿಕರಂ ನೀನೆ ಬಡವಂ ;
ನೋಡಿಯಡಕೆಯ ಮರವ ಮರುಗ ಬೇಡೆಲೆ ಬಾಳೆ,
ಕಾಡುಗಿಡಗಳ ನೋಡಿ ತಾಳಿ ಬಾಳು !

೩೦

ಉರುಳಿಸುವುದತಿ ಸುಲಭ ಶಿಲೆಯ ಗಿರಿಶಿರದಿಂದ
ಕಿರಿದೆ ? ಅದ ನಿಲಿಸೆ ಗಿರಿತುದಿಯ ನೇರಿ,
ನಿರುತ ದುಡಿಯಲು ಬೇಕು ನರನೇರೆ ಗುಣಗಿರಿಯ-
ನುರುಳೆ ಚಣಮೇ ಸಾಕು ಕಾಲುಜಾರಿ.

೩೧

ಕರೆಯದೊಳನುಗ್ಗುವುದು, ಕೇಳದೆಯೆ ನುಡಿಯುವುದು
ಬರಿದೆ ತಾನತಿಯಾಪ್ತನೆಂದು ಬಗೆದು,
ನಿರುತವೊಡೆಯನ ಬಳಿಯೆ ಸುಳಿಯುವನ ಲೋಕದಲಿ
ಕರೆದು ಹೊಡೆ, ದುರ್ಮತಿಯ ಕಾಲು ಬಿಗಿದು.

೩೨

ಇರುವುದೇಂ ಸೌಂದರ್ಯ ವಸ್ತು ಸ್ವಭಾವದಿಂ ?
ದಿರದಾವುದುಂ ನಷ್ಟ ಸೌಂದರ್ಯಮುಂ !
ಇಷ್ಟವೋ ವಸ್ತುವಿನ ಸೌಂದರ್ಯದೊರೆಗಲ್ಲು
ಇಷ್ಟವಾಗದುದೆಮಗನಿಷ್ಟಮಲ್ತೆ !

೩೩

ಆವನಾವನ ಭಾವಮೆಂತಂತು ಪರಿದಪುದೊ
ಭಾವಮುದಮಂತಂತು ಪಿಡಿದು ಜಾಣಂ,
ಆವನಾಳವಮಂ ಪೊಕ್ಕು ನಡೆಸಿಯುವನಿಂಗಿತವ
ಗಾಳದಿಂ ಮೀನಿನೊಲು ಪಿಡಿವ ಗುಣದಿಂ,

೩೪

ಯೋಗ್ಯತೆಯ ಪರಿಗಣಿಸಿಯವರವರ ನೆಲೆಗಳಲಿ
ಇಡಬೇಕು ಸೇವಕರ ಒಡವೆಯಂತು ;
ಮುಡಿಯೊಡವೆ ಚರಣದಲಿ ನೂಪುರವ ಮಂಡೆಯಲಿ
ಧರಿಸುವರ್ ಲೋಕದಲಿ ಜಾಣರೆಂತು ?

೩೫

ಅಜ್ಞರಂ ಗೌರವಿಸಿ ತಜ್ಞರಂ ಕಡೆಗಣಿಸೆ
ಪ್ರಾಜ್ಞಕೊರಗುವುದೇಕೆ ಮನದೊಳಳುಕಿ ?
ಗಾಜು ಮಕುಟದೆ, ಮಣಿಯ ನೂಪುರದೆ ಕುಂದಣಿಸೆ
ಮಣಿದೋಷಮಲ್ಲಮದು ಧರಿಪನಳುಕು,

೩೬

ಎಡರುಗಳ ಭಯದಿಂದೆ ಮನವಳುಕಿ ಮೈಮರೆದು
　　ಕೆಲಸಕ್ಕೆ ಕೈಯಿಕ್ಕನಧಮ ಪುರುಷಂ,
ಜಠರ ಜೀರ್ಣಿಸದೆಂಬ ಶಂಕೆಯಿಂದನುದಿನಂ
　　ಕಡೆಗಾಣಿಸುವನೇನು ಮನುಜನುಣಿಸಂ ?

೩೭

ಬಾಲಭಾಷಿತಮೆಂದು ಕಡೆಗಣಿಸನೆಂದಿಗುಂ
　　ಯುಕ್ತಿಯುಕ್ತಮುಮೆನಿಪ ನುಡಿಯ ನಿಪುಣಂ,
ಕವಿದ ಕತ್ತಲು ಕಳೆಯೆ ದೀಪಶಿಖೆಯಂದದಲಿ
　　ಪುಗುವುದೇಂ ಕೋಣೆಯಲಿ ರವಿಯ ಕಿರಣಂ ?

೩೮

ಸತಿಸುತರ ಬಾಂಧವರ ಸೇವಕರ ಗುಣಗಣವ
　　ತನ್ನಳವಿನೊಳತೋಟೆಯಳೆಯಲಿಳೆಯೊಳ್,
ಆಪತ್ತಿನೊರೆಗಲ್ಲು ನರಗುಂಟು ಪರಿಕಿಸಲು
　　ಸ್ವರ್ಣಗುಣದೋಷಗಳ ನರಿವ ಪರಿಯೊಳ್

೩೯

ಆಪದದೆ ವಿಪಿನದಲಿ ದಾರಿ ತಪ್ಪಿದ ವೇಳೆ
　　ಕೆಲಸ ಮಾಡುವ ಕಾಲ ಮೀರಿದಲ್ಲಿ,
ಕೇಳದಿರ್ದರು ನುಡಿವುದೊಳಿತ ನೀಂ ತಡೆಯದೆಯೆ
　　ಬಲ್ಲರಾರೈ ಮುಂದೆ ಬರ್ಪುದೆಲ್ಲಂ ?

೪೦

ಅಪ್ರಿಯವನೆಸಗಿದರುಮುಪಕಾರಿಯಾದವಂ
　　ಹಿತಕಾರಿಯವನ ಪರಿಹರಿಸಲಳವೆ ?
ಮನೆಯ ಸುಟ್ಟುರುಹಿವರು ಭುವನಮುಂ ಬೆಳಗಿಸುವ
　　ಜ್ಯೋತಿಯುಂ ಕಡೆಗಣಿಸಿ ಬ್ಬಾಳಲಳವೆ ?

೪೧

ಪೊಲ್ಲದುದನೆಸಗಿದರುಮುಪಕಾರಿಯೆಂದಿಗುಂ
ಹಿತಕಾರಿ ತಾನಕ್ಕುಮಾತ್ಮ ಬಂಧು,
ಬೇನೆಗಾಕರ ದೋಷದೂಷಿತಂ ಕಾಯವಿದ
ಕಡೆಗಾಣಲಕ್ಕುಮೇಂ ತ್ಯಾಜ್ಯಮೆಂದು ?

೪೨

ಅಧರ ಕಹಿಯಾದರುಂ ಪರಿಣಾಮ ಹಿತಮೆನಿಪ
ಮರ್ದಿನೊಲು ಹಿತವಚನ ಪಥ್ಯಮೆನಿಕುಂ,
ಪಥ್ಯ ತಥ್ಯವ ನುಡಿವ ನಡೆವರಿರುವೆಡೆಯಲ್ಲಿ
ಸರ್ವಸಂಪದ ಲಕ್ಷ್ಮಿ ನೆಲೆಸಲಕ್ಕುಂ.

೪೩

ಓರ್ವನೆಸಗಿದ ದೋಷಕೋರ್ವನಂ ಗುರಿಪಡಿಸಿ
ದಂಡಿಸುವುದನುಚಿತಂ ದರ್ಪದಿಂದ ;
ದಂಡನವೊ ಮುಂಡನವೊ ಕಣ್ಣಾರೆ ಕೆಡಿಸಗು
ದಂಡಧರನುಳಿದಿಹಂ ಧರ್ಮದಂಡ.

೪೪

ಗುಣ ದೋಷವೆಣಿಸದೆಯೆ ಸುಗುಣಿಯಂ ಕಡೆಗಣಿಸಿ
ದುರ್ಗುಣಿಯ ಗೌರವಿಪುದುಚಿತಮೆಂತು ?
ತನ್ನಳಿವಿಗೆಡೆಗುಡುವ ದುಷ್ಕೃತಿಯ ನೆಸಗುವುದು
ಫಣಿ ಮುಖದೆ ಕೈಯಿಟ್ಟು ಬದುಕುವಂತು !

೪೫

ಕಲೆವಂತನಾದರುಂ ಕಾಲಕಸವೆನಿಸುವಂ
ಜನಬಲದ ತೇಜದಿಂ ಬೆಳಗದಿರಲು ;
ಒಲೆ ಬೂದಿಯಂ ಬಗೆದು ಕಾಲಿನಿಂ ಕೆದಕುವರು
ಬಿಸಿಯುಳಿಯೆ ನಿಶ್ಶಂಕೆಯಿಂದ ನರರು

೪೬

ಯಾಚಕಂ ಪೀಡಿಸಲು ಕೋಪಗೊಳ್ಳದನಾರು !
ದುಷ್ಟಜನಕಾರಿಲ್ಲಿ ನೆಂಟರಿಲ್ಲ !
ತಾನಾಗಿ ಧನವೆಷ್ಟಿದೆ ತಣಿಯದವರಾರಯ್ಯ!
ಕೆಟ್ಟ ಕೆಲಸದೊಳಾರು ನಿಪುಣರಲ್ಲ ?

೪೭

ಧರ್ಮಾರ್ಥಕಾಮುಗಳ ಸಾರಜ್ಞನಾವಗಂ
ಕೇವಲಂ ಕಾರುಣ್ಯ ತೋರನೆಂದುಂ !
ಆಶ್ರಯಿಸಿ ಶಾಂತಿಯಂ ಕಾರುಣ್ಯ ಕರೆಯುವೊಡೆ
ಕೈಲಿರುವ ಕವಳಮುಂ ಸವಿಯನೆಂದುಂ.

೪೮

ಪಣ್ಣಿಡಿದ ಮರನೆರಳ ಸಾರಿ ಸುಖಿಸಲು ಬೇಕು
ಪಣ್ಣಿಲ್ಲದೊಡೆ ನೆರಳಿಗುಂಟೆ ಕೊರತೆ ?
ಘನವಂತನೆನಿಸಿರ್ಪ ಧನಿಕನಾಶ್ರಯ ಸೇರು
ಧನವಿಲ್ಲದಿರಲುಂಟು ಘನತೆಯೊರತೆ !

೪೯

ಹೀನರಾಶ್ರಯ ಹೊಲ್ಲ ಮಹಿತರಾಶ್ರಯ ಬೆಲ್ಲ,
ದಾನವಿಲ್ಲದ ಧನಿಯ ನೆರೆಯ ಸಲ್ಲ ;
ಈಡಗಿತ್ತಿಯ ಕೈಲಿ ಪಾಲಿರ್ದು ಫಲವಿಲ್ಲ
ಹೆಂಡವೆಂದವ ಕಂಡು ಪಳಿವರೆಲ್ಲ !

೫೦

ಕಷ್ಟ ಕಾಲಿಡುವನಕ ಶಾಂತಿ ಸತಿ ಕೈಹಿಡಿದು
ನಿಷ್ಟೆಯಿಂದಲಿ ಬಾಳು ಕಷ್ಟಕಂಜಿ,
ಕಷ್ಟ ಬಂದೆರಗಿದೊಡೆ ಕನಲಿ ನಿಂದೊಡೆ ಕಷ್ಟ
ಕರಗುವುದು ಮಂಜಿನೊಲು ರವಿಗೆ ಅಂಜಿ.

೫೧

ಸುಧೆಯಕ್ಕು ಪರದೇಶದಲಿ ಬಂಧುದರ್ಶನಂ
ಹಿಮಪೀಡಿತಗೆ ಬೆಂಕಿ ಸುಧೆಯೆನಿಸುಗುಂ,
ಕಾರ್ಪಣ್ಯಪೀಡಿತಗೆ ಸುಧೆ.ರಾಜ್ಯಸನ್ಮಾನ
ಪಸಿದವಗೆ ಮೃಷ್ಟಾನ್ನಮಮೃತಮೆನಿಕುಂ.

೫೨

ಪಂಡಿತನುಮಲ್ಲದಂ ಪ್ರಿಯಮೆಂದಿಗುಂ ನುಡಿಯ
ಖಂಡಿತವ ನುಡಿಯನ್ನೆ ಕಪಟೆಯಿನಿಸುಂ,
ನಿಸ್ಪೃಹನುಮಧಿಕಾರಿಯೆಂತಕ್ಕು ಲೋಕದಲಿ
ನಿಷ್ಕಾಮಿ ಗುಂಟೇನು ಸೊಗಸಿನಾಸೆ ?

೫೩

ಮಂದಮತಿಯಿಂದ್ರಿಯಕೆ ಮನಸೋತು ಮತಿಗೆಟ್ಟು
ಕಾಲನಿಗೆ ವಶನಾಗಿ ಕೆಡುವನಲ್ತೆ !
ನಾಲಗೆಯ ರುಚಿ ಗೆಳಿಸಿ ನೀರಿನಲಿ ನಿವಸಿಸುವ
ಮೀನುಗಳು ಗಾಳದಲಿ ಬೀಳುವಂತೆ !

೫೪

ಗೆಳೆಯರೊಳು ಭಿನ್ನತೆಯ ಪಗೆವರೊಳಗೈಕ್ಯತೆಯ
ವಿಷಮ ಶೀತಜ್ವರದೊಳೆಸಗೆ ವೈದ್ಯಂ
ಮೆರೆಯ ಬೇಕೈ ಜಾಣ್ಮೆ ಸಂಧಾನ ಚಾತುರ್ಯ
ಸ್ವಸ್ಥಗುಂಟೇಂ ಕೂಟನೀತಿ ವೈದ್ಯಂ,

೫೫

ಹೆರರೊಡವೆ-ಹರಣಗಳನಪಹರಿಸಿ ಹಿಂಸಿಸುವ
ದುಷ್ಟ–ನಾಗಗಳಿಷ್ಟ ಫಲಿಸುವಲ್ಲಿ,
ಚಿರಕಾಲದಿಂ ಪೊರೆವ ಜಗದೊಡೆಯ ನಿರ್ಮಿಸಿದ
ವೈರವರ್ಗದ ಸೃಷ್ಟಿ ವ್ಯರ್ಥಮಲ್ತೆ !

೫೭

ಸುವಿವೇಕ, ಹಿತಬೋಧೆ, ಧನ-ಮೌಷಧಗಳಿಂದ
ದುಸ್ಸಾಧ್ಯಮೇನುಂಟು ವಿಶ್ವದಲ್ಲಿ,
ಮಡಿ ! ನಿರುತಮೀನಾಲ್ಕು ಸಾಧಿಸಲು ಜೀವನದೆ
. ಪಡೆವೆ, ಸುಖ ಸಂಪದವ ಭುವನದಲ್ಲಿ.

೫೭

ನಿಜಶಕ್ತಿಯಿಂದೆಲ್ಲಿ ಸಕಲ ಸುಖಸಂಪದವ
ಗಳಿಸಿ ತೇಜದೆ ಬೆಳಗಿ ಬಾಳ್ದ ಜೀವಂ,
ವಿಧಿವಿಲಾಸದೊಳಲ್ಲಿ ಹೀನಸಂಪದಮೆನಿಸಿ
ದೈನ್ಯದಿಂ ಜೀವಿಸುವುದೀಗೆ ನೋವಂ

೫೮

ಅಧಿಕಾರ ನಡೆವಂದು ಬಹುದರ್ಪ ವೈಭವದೆ
ಹಮ್ಮು ಬಿಮ್ಮುಗಳಿಂದ ಬಾಳ್ದನಾವಂ,
ಅಧಿಕಾರ ಕೈತಪ್ಪಿ ಬಡತನಂ ಬಳಿಗೈದೆ
ದೀನ ಯಾಚನೆ ಗೈಯೆ ತಾಳ್ವ ನೋವಂ.

೫೯

ದುಗುಡಗಳು ಮೇಲ್ಮಿಂದ ಮೇಲುರುಳಿ ಕವಿದು ಬರೆ
ಧೃತಿಗೆಡದ ಮತಿಯುತಂ ಸುಖಿಯೆ ಸಹಜಂ,
ಸುಖ ಬಪ್ಪುಪೆಂದಾದರೊಂದುದಿನ ಜೀವನದೆ
ಎಂದು ದುಗುಡವ ನುಂಗಿ ಬಾಳ್ಗೆ ಮನುಜಂ,

೬೦

ಸನ್ಮಿತ್ರರಂ ಪಡೆದ ಮಾನವಗೆ ಲೋಕದಲಿ
ದುಸ್ಸಾಧ್ಯಮೆನಿಸಿರ್ಪುದುಂಟೆ ನಿಜದಿಂ ?
ಗುಣಶೀಲ ಸಂಪದದೆ ತನಗೆಣೆಯ ಗೆಳೆಯರಂ
ಪಡೆವುದೇ ಜೀವನಧ್ಯೇಯ ಸಹಜಂ.

೬೧

ಸಕಲ ಸಂಪದದಿಂದೆ ಪರಿಪೂರ್ಣನಾದರುಂ
ಮಿತ್ರರುದಯದೆ ಹರ್ಷವಾಂಪ ಸುಜನಂ,
ನದಿಗಳಿಂ ಪರಿಪೂರ್ಣಮಾದರುಂ ಮುನ್ನೀರು
ಹುಣ್ಣಿಮೆಯ ಚಂದ್ರನಿಂದುಕ್ಕಿ ಪರಿಗುಂ

೬೨

ಗಳಿಸುವೊಡೆ ಗೆಳೆಯರಂ ತನಗೆಣೆಯರಾದವರ
ಗಳಿಸುವನೆ ಜಾಣನೆಂದೆನಿಪ ಮನುಜಂ,
ಮೇಲು ಕೀಳಾದವರು ಗೆಳೆಯರಾದೊಡೆ ನಿನಗೆ
ಪರಿಹಾಸ್ಯ ಕೆಡೆಯಾಗಿ ಕೆಡುವೆ ಸಹಜಂ.

೬೩

ಗುಣಗರಿಮೆಯಿಂ ನಿರುತ ಭುವನಮಂ ಬೆಳಗಿಸುವ
ಸುಜನರುಪದೇಶದಿಂ ಪಾಪಿ ಪುರುಷಂ,
ಬಿಡನೆಂದಿಗುಂ ತನ್ನ ದೌರ್ಜನ್ಯ ವೃತ್ತಿಯಂ
ತೊಳೆದರುಂ ಕರೆ ಬಿಡದ ಇದ್ದಿಲಂತೆ.

೬೪

ಮರೆಯ ಬೇಡೈವರಂ ಜೀವವಿರುವನ್ನೆಗಂ
ಜನಕನುಪದೇಶಕನನೋಜೆವರನಂ,
ಕರೆದನ್ನವಿಕ್ಕಿದನ ಪೊರೆದನಂ ಭಯದಿಂದೆ
ನರಗೈವರುಂ ಪಿತರುಮೆಂಬರದರಿಂ,

೬೫

ಕನ್ನೆ ವರರೂಪಮಂ ತಾಯಿ ವರನ್ನೈಸಿರಿಯ
ಮನ್ನಿಸುವನ್ನೈ ತಂದೆ ಬಿಜ್ಜೆಜನಮಂ,
ನನ್ನಿ ಕುಲಗೌರವವ ಬಯಸುವರ್ ಬಾಂಧವರು
ಅನ್ನಮಿನ್ನುಳಿದವರ್ ನೆನೆವರನಿಶಂ,

೬೭

ಆಳದಿಂದಾರ್ತ್ಯಿದು ಗುರುಹಿರಿಯರೆಡೆಯಲ್ಲಿ
ಕೇಳಿ ಹಿತವರ ತಾಳು ಎಸಗಿದೆಸಕಂ,
ಬಾಳ್ವುದೈ ಕಡೆತನಕಮೆಡರಳಿದು ಕೊನೆಮುಟ್ಟೆ
ಬೀಳು ಗೆಡೆವುದು ದುಡುಕಿ ಗೈದ ಕಜ್ಜಂ,

೬೭

ಉಪಕಾರಿಗುಪಕೃತಿಯ ಹಿಂಸಕಗೆ ಹಿಂಸೆಯಂ
ಅಪಕಾರಿಗಪಕೃತಿಯ ನೆಸಗಲಿಳೆಯೊಳ್,
ನೆಸಮಾತ್ರಮಿಲ್ಲೆಮಗೆ ಪಾಪಮಿನಿತಾದರುಂ
ನೃಪನೀತಿ ದುಷ್ಟನೊಳು ದೌಷ್ಟ್ಯಮೆಸಗಲ್,

೬೮

ನಡುಗಾಡಿನೊಳು ಬೆಳೆದ ಗೆಡ್ಡೆ ಗೆಣಸಂ ಕಡಿದು
ನಿಡುಗಾಲ ತೊರೆನೀರ ಕುಡಿದಾದವರುಂ,
ಸುಡುಗಾಡಿಗೆಡೆಯಪ್ಪ ಘಟ ಹೊರೆದು ಜೀವಿಸಿರು
ಕೊಡಬೇಡ ಕಡುಪಾಪಕೆಡೆಯನೆಂದುಂ.

೬೯

ತಾಯ ಗರ್ಭದೊಳಂದೆ ವಿಧಿ ಬರೆದ ಹಣೆಯಲ್ಲಿ
ಆಯು-ವಿತ್ತವು-ವಿದ್ಯೆ-ಕರ್ಮ-ನಿಧನಂ,
ಮಾಯೆ ಕೈವಾಡವಿದು ನಟ ನೀನು ಕೇವಲಂ
ರಾಯನೋರ್ವಂ ನಿನ್ನ ಕುಣಿಸುತಿರ್ಪಂ

೭೦

ಕಾಲು ಕಾಲಿನ ಮೇಲೆ ಬರೆದ ನಾಮಾಕ್ಷರವ
ತಾಳ್ಮೆಯಿಂದೋದು ಬಾ ಋೂಳಮನುಜ!
ಬಾಳ ಬೆಳಗಿಸಿ ಬದುಕು ಬಂದುದಂ ಕೈಕೊಂಡು
ಕೇಳಿ ಕರುಬುವೆ ಏಕೆ ಹೆರರ ಕಣಜ ?

೭೧

ಶರಣಾದನಂ ಪೊರೆಯೆ ಪೆಣ್-ಗೋವು-ಬುಧವರರ
ಸ್ವಾಮಿ ಕಾರ್ಯಕೆ ತನುವ ತೆರುವ ಮನುಜಂ,
ಕಾಮಿತಾರ್ಥವ ಪಡೆದು ಪುಣ್ಯ ಲೋಕದಿ ಮೆರೆವ
ಜೀವನಾದರ್ಶಮಂ ಮೆರೆದ ಕತದಿಂ.

೭೨

ನಂಬಿದರ ವಂಚಿಪೊಡೆಯೇನುಂಟು ಜಾಣತನ ?
ತುಂಬಿದರವಿಯ ಪೊಡೆಯೆ ಕಲ್ಲು ಬೇಕೆ ?
ತೊಡೆದಿಂಬಿನಲಿ ಮಲಗಿ ನಿದ್ರಿಸುವ ಕಂದನನು
ಕೊಲ್ಲುವೊಡೆ ಕೈದುವಿನ ನೆರವು ಬೇಕೆ ?

೭೩

ಬೇಡ ಬಹುಜನವೈರ ಕೇಡುಂಟು ಕಡೆಗೊಮ್ಮೆ,
ಸ್ವಜನದುರ್ಜನರಾದರೇನು ನಮಗೆ ?
ಕಟ್ಟಿರುವೆ ಗೂಡಿನಲಿ ಕಾಳೋರಗಂ ಸಿಕ್ಕಿ
ಕಡಿಯುತಿರೆ ಮಡಿಯದೇಂ ಕೊರಗಿ ಕಡೆಗೆ !

೭೪

ತಿಳಿಗೇಡಿಯೆಸಗಿದಪರಾಧಮಂ ಮನ್ನಿಪುದೆ
ತಿಳಿದರಿಗೆ ಭೂಷಣಂ ಧರೆಯೊಳೆಲ್ಲಂ,
ತಿಳಿವೆಲ್ಲರೊಳಗೊಂದೆ ತರವಲ್ಲ ಭಾವಿಸಲು
ಬೆಳೆವುದೇಂ ಸಿರಿಗಂಧ ಪಳುವೊಳೆಲ್ಲಂ.

೭೫

ಕೊಟ್ಟು ಪುಟ್ಟದಗೆಲ್ಲ ಸಂಪದಂ ಸಮನಿಕುಂ
ನಿಷ್ಠೆಯಿಂದೈಸಿರಿಯು ತಾನೆ ಬರ್ಕುಂ,
ಬೆಟ್ಟಗುಡ್ಡಗಳಲ್ಲಿ ನೀರೊಸರಿ ಪರಿದರುಂ
ಚಾದಗೆಯು ಬಾಯಾರಿ ಕೊರಗುತಿರ್ಕುಂ.

೭೬

ಪಥ್ಯಮಿಲ್ಲದನಾಯು ನೀತಿರಹಿತನ ಸಿರಿಯು
ಕಾಕತಾಳೀಯದೊಲು ಕಳೆವುದೊರ್ಮೆ
ಪುಳು ಮರವ ಕೊರೆಯುತಿರಲಕ್ಷರಂ ಕಾಂಬವೊಲು
ಸಿರಿ ತಾನೆ ಬೆಳೆಸರುಂ ಬೆಳೆವುದೊರ್ಮೆ!

೭೭

ಜಯವು ಅವರಿಗೆ ಲಾಭವವರಿಗೆ
ಯಾರ ಹೃದಯದೆ ಶಂಕರಂ
ಯಾರ ಮಾನಸ ಶಿವನ ತವರೊ
ಅವರ ಮನವೇ ನಂದನಂ !

೭೮

ಕೊಂಬೆಯಿಂ ಕೊಂಬೆಗಂ ಲಂಘಿಪುದೆ ಮಂಗನಿಗೆ
ಸಂಗತಂ ನೋಡುವೊಡೆ ಸಾರ ಶೌರ್ಯಂ,
ಮಂಗನಂಬೋಧಿಯಂ ಲಂಘಿಸಿದನೆನಲದಕೆ
ಸಂಗನೊಲುಮೆಯನುಳಿದು ಉಂಟೆ ಧೈರ್ಯಂ ?

೭೯

ಮರದಾನೆ ಚತುರಂಗ ಬಲಮೊಳಗೆ ಬಳಸುವರೆ ?
ಚರ್ಮಮೃಗ ಕಂಜುವವೆ ಜೀವಕೋಟಿ ?
ವೇದವರಿಯದ ವಿಪ್ರ ವೈದಿಕವ ನಡೆಸುವನೆ
ನಾಮಮಾತ್ರದ ನರರು ನೂರು ಕೋಟಿ !

೮೦

ನಿಜ ನನ್ನಿಕಾರಂಜಿ ಮಾನಸದೊಳುಕ್ಕುತಿರೆ
ದೂರದೊಳಗಿರ್ದರುಂ ನೆರೆಯೊಳಿರ್ಕುಂ ;
ನೈರಕಿಡಿ ಕಾರುತಿರೆ ನೆರೆಯೊಳಗೆ ಸುಳಿದರುಂ
ದೂರ ಸರಿದವನಂತೆ ತೋರುತಿರ್ಕುಂ,

೬೧

ಕಲ್ಲಿನಲಿ ಕಾಷ್ಟದಲಿ ಮಣ್ಣು ಮೊರಡಿಗಳಲ್ಲಿ
ಮಲ್ಲಯ್ಯನಂ ಪುಡುಕಿ ಬಳಲಲೇಕೆ ?
ಬಲ್ಲವರ ಭಾವದೊಳಗೆಲ್ಲನಂ ತುಂಬಿರುವ
ಮಲ್ಲಯ್ಯನಿಲ್ಲವೇನಲ್ಲಿಗೇಕೆ ?

೬೨

ಕಲ್ಲಿನಲಿ ಕಂಭದಲಿ ತೃಣರೇಣು ಕಾಷ್ಟದಲಿ
ಕೊಡಲಿಯಲಿ ಕುಡುಗೋಲು ಮೊನೆಯೊಳಡಗಿ
ಶಿವನಿರ್ಪದುಡುಮೆಯಲಿ ; ಕೂಡುವನೆ ಕೇವಲಂ
ಗುಡಿಯೊಳಗೆ ಕಡೆದಿರ್ಪ ಕಲ್ಲೊಳಡಗಿ

೬೩

ಕೋಪೋರಗನ ಮೆಟ್ಟಿ ಪಲ್ಗಳಂ ಕಳಚದೊಡೆ
ಲೋಕದೊಳು ಬೆಳ್ಪಿಸವ ಗಳಿಸಲಳವೆ ?
ಕೋಪ ತಾಪಕೆ ಸಿರ್ಕಿ ಪೀರ್ದನುಜರಕುತಮಂ
ಪಳಿಪೊರ್ದಿದನಿಲಜನ ಮರೆಯಲಳವೆ.

೬೪

ದಯೆಯಿಂದೆ ದೀರ್ಘಾಯು ದಾನದಿಂ ಭೋಗಮುಂ
ವೃದ್ಧ ಸೇವೆಯನೆಸಗೆ ಬುದ್ಧಿ ಬಲವುಂ,
ಭಯದಿಂದ ಭಕ್ತಿಯುಂ ನಯದಿಂದ ಶಕ್ತಿಯುಂ
ಸಿದ್ಧಿಸುವುದೀ ಜಗದೆ ಸಿದ್ಧರೊಲವಿಂ.

೬೫

ನೀರೆಳಸಿ ಗುದ್ದಲಿಯಲಗಿದಗಿದು ನೆಲದೊಳಗೆ
ತಿಳಿನೀರ ತಳದಲ್ಲಿ ಪಡೆವ ತೆರದೊಳ್,
ತಿಳಿವೆಳಸಿ ದಿನದಿನಂ ಗುರುವಿನಲಿ ಶಿಶ್ರೂಷೆ
ಗೈದೆಲ್ಲ ವಿದ್ಯೆಯಂ ಗಳಿಪುದಿಳೆಯೊಳ್.

೮೬

ಕಿರಿಯನಿಂದಾಪರುಂ ಸಂಗ್ರಹಿಸು ವಿದ್ಯೆಯಂ
ಪತಿತನಿಂದಾದರುಂ ಧರ್ಮಪಥಮಂ.
ಸ್ತ್ರೀರತ್ನಮಂ ನೀಚಕುಲದಿಂದಲಾದರುಂ
ಕಸದೊಳಿಹ ಕಸವರವ ನೆಸೆವರೇನು ?

೮೭

ಕೊಡುವನೆಂದಾವಗುಂ ಬೇಡದಿರು ದಾನಿಯಂ
ಕೋಪಗೊಂಡವ ಕಡೆಗೆ ಕೇಡನೆಣಿಪಂ,
ಕುದುರೆ-ಕಮಲೆಯ ಕಾಮಧೇನುಗಳ ನಿತ್ತರುಂ
ಕಡೆಯುತಿರೆ ಕಾರಿದುದು ಕಡಲು ವಿಷಮಂ

೮೮

ಸಗ್ಗ ಹುಲ್ಲಿಗೆ ಸಮವು ಬೊಮ್ಮವನು ಬಲ್ಲವಗೆ
ಸಲ್ಲಲಿತ ಜೀವನಂ ಶೂರಗಿಳೆಯೊಳ್,
ಹೇಯನಾರೀರೂಪ ವಿಜಿತೇಂದ್ರಿಯಂಗೆನಲು
ಪುಲ್ಲಿಗೆಣೆ ನಿಸ್ಪೃಹಗೆ ವಿಶ್ವಮೆಲ್ಲಂ

೮೯

ಅರ್ಥಶೌಚಮನುಳಿದು ಬೇರೆ ಶೌಚಮದುಂಟೆ ?
ಮಣ್ಣು ನೀರಿನ ಶೌಚಮೆಂತು ಶೌಚಂ !
ದ್ರವ್ಯಮಾರ್ಜಿಸುವಲ್ಲಿ, ವೆಚ್ಚದೌಚಿತಿಯಲ್ಲಿ
ಹೃದಯ ಶುದ್ಧಿಯೆ ನರಗೆ ನಿತ್ಯಶೌಚಂ.

೯೦

ದುರ್ವೃತ್ತನವಿವೇಕಿ ಕರ್ತವ್ಯಗೇಡಿಯಂ
ಮದಮತ್ತಮಾನಸಂ ನೀತಿದೂರಂ
ದಾರಿ ಮೀರಿದ ನರಂ ಗುರುವಾದರೇನಂತೆ
ಬುದ್ಧಿಗಲಿಪುದೆ ಜನಕೆ ನೀತಿಮಾರ್ಗಂ

೯೧

ದೇಶಾಂತರವನ್ನೈದಿ ಸದ್ಯಶವನಾಂತಪರ್
ಗಜ-ಸಿಂಹ-ವಿಬುಧರುರು ಸಾಧುಚರಿತರ್
ನಿಂದ್ಯ ಜೀವನನೆಳೆದು ಪುಟ್ಟಿದೆಡೆ ಮಡಿಯುವರ್
ಕಾಗೆ-ಮೃಗ-ಕಾಪುರುಷ ದುರ್ಭಗಾಂಕರ್

೯೨

ಗುಣಮ ನೀಂ ಪರಿಗಣಿಸು ರೂಪಮಾತ್ರದಿನೇನು ?
ಶೀಲ ಸಾಲದೆ ಕುಲಕೆ ಬಳಲಲೇಕೆ?
ಸಿದ್ಧಿಯಿಂದರಿಯದಿಹುದೇನುಂಟು ವಿದ್ಯೆಯಲಿ
ಭೋಗದಿಂ ಬಗೆಯರಿಯೊ ಧನದಿನೇನು ?

೯೩

ಆದಾಯ ಕಿಂಮಿಗಿಲು ವೆಚ್ಚಮೆಸಗುವ ನರನು
ಅಸಹಾಯ ನೆನಿಸಿಯುಂ ಸಮರಕಿಳಿವಂ,
ಪಥ್ಯಮಂ ಪರಿಕಿಸದೆ ಭಕ್ಷಿಸುವ ರೋಗಿಯುಂ
ನಾಶವೈದುವ ಬೇಗ ಪೊರ್ದಿಪಳಿವಂ.

೯೪

ಸಂದೇಹ ಕೆಡೆಯಿತ್ತ ಮೃಷ್ಟಾನ್ನ ದೂಟಮಂ
ಸಡಲಿ ವಸಡಿಂ ಚಲಿಪ ದಂತಚಯಮಂ,
ವಂಚನೆಯ ಸಂಚಿನೊಳು ತೊಡಗಿರುವ ಸಚಿವನಂ
ಬುಡಮಟ್ಟ ಕಿತ್ತೆಸೆದು ದೂಡು ಭಯಮಂ.

೯೫

ಕಮಲದಿಂ ಕಾಸಾರ, ನಿಶೆ ಶಶಿಯ ಕಲೆಯಿಂದೆ
ವಿಮಲ ಯೌವನದಿಂದ ವನಿತೆಯಂತೆ,
ರಮಣನಿಂದಂಗನೆಯು ವಿನಯದಿಂದೈಸಿರಿಯು,
ಸುಮವು ಸೌರಭದಿಂದಮೆಸೆವುವಲ್ತೆ !

೯೭

ಉದ್ಯೋಗಿಯಂ ಬಿಡದೆ ಲಕುಮಿತಾನೊಲಿಯುವಳು
ಬಗೆಯುವಂ ಕಾಪುರುಷ ದೈವವೆಂದು,
ದೈವಮಂ ತುಳಿದೆಸಗು ಪೌರುಷವ ಮೆರೆ ಮುದದೆ
ಮಾಡಿಯುಂ ಮುಗಿಯದಿರೆ ದೋಷಮೇನು ?

೯೭

ಮಾನಸದೆ ಚಿಂತಿಸಿದ ವಿಷಯಮಂ ಮಾತಿನಲಿ
ಆಡಿದುದನೇ ಮಾಡಿ ತೋರಿಸುವರು,
ಮನಸು ನಡೆ ನುಡಿಗಳಲಿ ಬಿರುಕುಂಟೆ ಸಂತರಿಗೆ
ಏಕರೂಪತೆ ಮೂರು ಕರಣವಲ್ಲಿ

೯೮

ಸೋಂಬೇರಿ ಗುಂಟೇನು ಸುಖಭೋಗ ಸಂಪದವು
ಸೋಂಬೇರಿತನ ನರನ ನಿಜ ಶತ್ರುವು;
ಮಾಡುವುದಕಂ ಮಿಗಿಲು ಬಾಂಧವ್ಯತಾನಿಲ್ಲ
ಮಾಡುವವನೆಂದಿಗುಂ ಕೆಡನು ಜಗದೊಳ್,

೯೯

ಮಾಡುವನ ಲಕುಮಿತಾಂ ಕೈಹಿಡಿದು ನಡೆಸುವಳು
ಮಾಡದನ ದಾರಿದ್ರ್ಯಲಕುಮಿ ನೆರೆವಳ್,
ಮಾಡುವಗೆ ಮೂಲೋಕಮೊಡೆತನಂ ತಾನಕ್ಕು
ಮಾಟಮಾನವನತುಳ ಭಾಗ್ಯಮಲ್ತೆ !

೧೦೦

ಕಾಣ್ಬರ್ಸೈ ಸಜ್ಜನರು ನಾರಿಕೇಳದ ತೆರೆದೆ
ದುರ್ಜನರು ಬದರಿಯೊಲ್ ಹೊರಗೆಸೆಯುವರ್
ಮುರಿಯೆ ತಾವರೆದಂಟನೆಳೆಗಳೇಂ ಹರಿಯುವವೆ
ಗುಣವ ಬದಲಿಸ ಸಾಧು ಚಿನ್ನದಂತೆ

## ಎಸಳು-೬

೧

ತ್ರಿಪುರದಾಹದೆ ಹರಿಯು ಶರವಾಗೆ, ಬಳಿಗೆಯ್ದ
ಗರುಡ, ಕಿಡಿಗಣ್ಣರಿಗೆ ಹೆದರಿ ಸರಿಯೆ ;
ಕುಗ್ಗಿ ಹಿಗ್ಗಿದ ಶೇಷ ಹೆಡೆಯಿಂದೆ ಗುರಿಕೆಡೆಯೆ
ಕೆಮ್ಮನಿಹ ಶಿವನೆಮ್ಮನಿರದೆ ಪೊರೆಗೆ.

೨

ಆರ್ಜಿಪುದು ಪುಣ್ಯಮನೆ ಗಳಿಪ ವಸ್ತುಗಳಲ್ಲಿ,
ಸಹಜ ಸಜ್ಜನಸಂಗ ಮಾಳ್ಪುದೆಂದುಂ ;
ಭಜಿಸುವುದು ಪರಶಿವನ ಭಕ್ತಿಯಿಂದನವರತ
ಬಯಸು ಪರಪಥವಿಯುಂ ಮರೆಯದೆಂತುಂ !

೩

ಬದುಕಿರಲು ನರನ ಗುಣವರಿಯರ್ಕೆ ಧರೆಯ ಜನ !
ತನುವಳಿಯೆ ಬೆಳಗುವುದು ಸಹಜಮಿಳೆಯೊಳ್ ;
ಸಾದೆಯಲಿ ಬೆರೆದಿರ್ಪ ಚಂದನದ ಸೌರಭಂ
ಉರಿಯುತಿರೆ ಹರಡುವುದನರಿಯರೊಳರೆ !

೪

ತಿಳಿದವರ ಸಂಗದಿಂ ತಿಳಿಯುವವು ಶಾಸ್ತ್ರಗಳ್
ಶಾಸ್ತ್ರದಿಂ ವಿನಯಗುಣ ಬರ್ಪ್ಪುದಿರದೆ ;
ವಿನಯದಿಂ ಜನದೊಲವು ಲಭಿಸುವುದು ಲೋಕದಲಿ
ಜನರೊಲಿಯೆ ಸಿದ್ಧಿಸದ ಕಜ್ಜಮುಂಟೆ ?

೫

ದಾನದಿಂ ದೈಶ್ವರ್ಯ ಧರ್ಮದಿಂದಾಯುಷ್ಯ
ನುಡಿಯು ನಡೆಯಿಂ ಕಾರ್ಯ ಪುಣ್ಯಕೃತಿಯೊಳ್ ;
ವಿನಿಯೋಗಮಾಗದಿರೆ ನಿಸ್ಸಾರಮೆನಿಸವೇಂ
ಸ್ಥಿರಮಾವುದಿವುಗಳೊಳ್ ಮನುಜಗಿಳೆಯೊಳ್,

೬

ಲೋಕೋಪಕಾರವಿಧಿ ಬಡವರಿಂ ನಡೆವಂತೆ
ಧನಿಕರಿಂದೆಂದಿಗುಂ ನಡೆಯುವಲ್ತೆ !
ಬಾಯಾರಿ ಬಂದವರ ಭಾವಿ ತಾಂ ಪಣಿಸುತೆ
ಕಡಲು ತಣಿವುವ ನಾರುಮರಿಯರಲ್ತೆ !

೭

ಸುಗುಣಮೆಲ್ಲರೊಳಿಹುದು ಗೆಳೆತನಂ ಬೆಳೆಸುವೊಡೆ
ಗೆಳವು ಕೆಲರೊಳಗಷ್ಟೆ ಬೆಳೆವುದಿಳೆಯೊಳ್,
ಕಮಲವರಳಿಪ ರವಿಯೆ ಕಂದಿಸಂ ಕುಮುದಗಳ
ಕುಮುದದಪಕೃತಿಯೇನೊ ತಿಳಿಯದೆಮಗೆ !

೮

ಎರಡು ನಾಲಗೆ ನಾಗಮಾವಗುಂ ನಿಧಿಯ ಬಳಿ
ನೆಲೆಸಿ, ಕಾಯ್ವುವರ್ಪುದನೆ ಕುಳಿತು ಬರಿವೆ ;
ನಿಧಿಗೊಡೆಯರೆನಿಸಿರ್ಪ ಧನಿಕರೆಡಬಲವಲ್ಲಿ
ದುರ್ಜನರ್ ನೆಲೆಸಿರ್ಪುದೇನು ಅರಿದು ?

೯

ಹೆರರನಾಶ್ರಯಿಸುವರ್ ಸಂಪದದೊಳಾವಗುಂ
ಸ್ವಜನರಂ ವಿಪದದೊಳು ಮೂಢಮತಿಗಳ್ ;
ಕ್ರೀಡಿಪುವು ಕಮಲದಲಿ ಮಕರಂದದೊಳು ಮಿಂದು
ದೊರೆಯದಿರೆ ಪಾಚಿಯೊಳೆ ರಮಿಪುವಳಿಗಳ್,

೧೦

ಹೀನತನದಿಂ ಗಳಿಸಿ ನಿಂದ್ಯಮೆನಿಸಿದ ಸಿರಿಯ
ಭುಂಜಿಸುವ ನರಸಿಂದ್ಯನೆನಿಪ ಜನರೊಳ್ ;
ಬೆಳ್ಳುಳ್ಳಿ ರಸಬೆರೆವ ಕರ್ಪೂರ ಪರಿಮಳವ
ಲೇಪಿಸಿದ ನರನಂತೆ ನಿಂದ್ಯನಿಳೆಯೊಳ್

೧೧

ತಿಳಿದವರೆ ಕೇವಲಂ ಗುಣಗಳೊಳಗಂತರವ
ತಿಳಿಯುವರ್ ಬೇರೆಯವರರಿಯಲಳವೇಂ ?
ಮಲ್ಲಿಗೆಯ-ಮಾಲತಿಯ ಕುಸುಮ ಸೌರಭಭೇದ
ಮೂಗರಿವ ತೆರನಂತೆ ಕಣ್ಣರಿಗುವೇಂ ?

೧೨

ತಿಳಿವು ಮುದುಪರೊಳೆಂತು ಮಾಗಿವ್ಯೈತಳೆಯುವುದೊ
ಎಳೆತನದೆ ತಿಳಿವುದಿಸಿ ಬೆಳೆಯಲಳವೇಂ ?
ಬಲಿತ ಚಂದನದಲ್ಲಿ ಸೌರಭಂ ಬೀರುವೊಲು
ಎಳೆಯ ತರು ಚಕ್ಕೆಯಲಿ ದೊರೆಯಲಳವೆ ?

೧೩

ಸುಜನರಂ ನಿಂದಿಸಿದ ನಿಂದೆ ಸುಜನರಿಗಲ್ತು
ನಿಂದಿಸಿದನಂ ಸಾರ್ವುದಲ್ತೆ ಮತ್ತೆ !
ಮುಗಿಲಿಗೆರಚಿದ ಬೂದಿ ಮುಗಿಲ ಮುಟ್ಟದೆ ಮತ್ತೆ
ಎರಚಿದನ ಮುಖಮನೇ ಮುಸುಕುವಂತೆ

೧೪

ನರನ ಯೋಗ್ಯತೆಯಳೆವ ಮಾನದಂಡವೆ ಬಟ್ಟೆ
ಬರುವುದೈ ಗೌರವಂ ಬಟ್ಟೆಯಿಂದ ;
ಶರಧಿಯಿತ್ತುದು ವಧುವ ಪೀತಾಂಬರಾಂಬರಗೆ
ಗರಳಮಂ ಚರ್ಮಾಂಬರಂಗೆ ಕನಲಿ !

೧೫

ಗುಣವಂತನಾವಗಂ ಸುಗುಣಿಯೆಂದೆನ್ನದಿರು !
ಸಹವಾಸದೋಷದಿಂ ಕೆಡುಗು ಸುಗುಣಂ ;
ಅನಲಗಾಹುತಿಯಾದ ಚಂದನದ ಬೂದಿಯಲಿ
ಪುಡುಕಲಳವೇಂ ಮೊದಲ ಸುರಭಿಗುಣಮಂ ?

೧೭

ದೊರೆವುದತಿ ದುರ್ಲಭಂ ಸುಜನಮಿಾ ಲೋಕದಲಿ
ಇರೆಯುವನನುತ್ತಮಂ ಸೆಳೆವನಿರದೆ ;
ಕಿವಿಯ ಕುಳಿಯಂ ಸಾರ್ದ ಜಲವನಾಕರ್ಷಿಪೊಡೆ
ಕಿವಿಯೊಳಗೆ ಜಲಮನೇ ಸುರಿವ ತೆರದೆ !

೧೭

ಬಲ್ಲವಂ ಬಲ್ಲಿದನ ಯುಕ್ತಿಯಿಂದಲ್ಲದೆಯೆ
ಗೆಲ್ಲ ಬಯಸನು ಮಲ್ಲಯುದ್ಧದಲ್ಲಿ ;
ಬುಡವ ಬಿಗಿದಿಹ ನೆಲವನಗಿದು ಬಿಡಿಸುತ್ತಿರಲು
ಪೊಡವಿ ಗುರುಳದೆ ತರುವು ಬೇರು ಸಡಲಿ ?

೧೮

ಸಹಜ ಸುಂದರವಸ್ತು ನಿಜದೀಪ್ತಿ ಬೆಳಗಿಸಲು
ಬಯಸುವುದೆ ಸಂಸ್ಕಾರಮಿನಿತಾದರುಂ ?
ಗಣಿಯ ರತ್ನದ ತೆರದೊಳೆಣಿಸುವುದೆ ಲೋಕದಲಿ
ಸಾಣೆಯಲಿ ಘರ್ಷಿಪುದನಾಣಿಮುತ್ತು.

೧೯

ತನ್ನವರ ನಿಂದೆಯಿಂ ಮನ್ನಣೆಯ ಬಯಸುವಂ
ಮನೆಮಾರಿ ಪರರಿಗುಪಕಾರಿಯೆನಿಪಂ ;
ಹಕ್ಕಿಬಳಗವ ಕುಕ್ಕಿ ಪೀಡಿಸುವ ಹೆಗ್ಗಿಡುಗ
ಚಿಕ್ಕನಾಗವ ಪಿಡಿದು ಮುಕ್ಕದೆಂದುಂ

೨೦

ನೆರೆಯಲಿಹ ಹಿರಿಯರಂ ನೆನೆಯರ್ಕೈ ನಾಡಜನ
ಕೊರೆಯುವರ್ ದೂರದಿಂ ಗಿರಿಯ ಬಿರುದಂ !
ಪರಿಯುತಿಹ ಪರಿಪೂತ ಗಂಗೆಕೆಲದೊಳಗಿರ್ದು
ಮರೆತಾದರುಂ ನರರು ನಮಿಸರೆಂದು,

೨೧

ಶ್ರವಣ ಕಟುವಾಗಿರಲಿ ಮನಕೆ ಮಧುವಾಗಿರಲಿ
ಸಮಯೋಚಿತಂ ನುಡಿವ ಮಾತು ಮಧುರಂ,
ಶುಭಶಕುನ ವೀಕ್ಷಿಸುವ ಪಯಣಿಗಗೆ ವಾಮದಲಿ
ಕಿರುಚುವೀ ಗಾರ್ದಭನ ಕೂಗೆ ಮಧುರಂ

೨೨

ಸದ್ವಿದ್ಯೆಯಲಸನಂ, ಭಯವು ನಿಷ್ಪಾಪನಂ
ಸನ್ಮಿತ್ರಸಂ ಪಳಿವು ಪೊರ್ದದೆಂದುಂ,
ನಾಣು ಕಾಮುಕಗಿಲ್ಲಮಲಸನಿಗೆ ಸಿರಿಸಲ್ಲ
ದುರ್ಜನಕೆ ಲೋಕವೇ ಇಲ್ಲವಿಂದುಂ.

೨೩

ಅನುಚಿತವ ನೆಸಗುವುದು, ತನ್ನವರ ನಿಂದಿಪುದು
ವನಿತೆಯರ ವಿಶ್ವಾಸ, ಸಬಲವೈರಂ
ಅನುದಿನಂ ಮನೆ ಜನರ ಗೋಳಾಟವೀಯೈದು
ಜನುಮ ಕಡೆಗಾಣಿಸುವ ಜಾಡ್ಯಮೆನಿಕುಂ

೨೪

ತನ್ನವರೆ ಆದರೂ ಬಹುಮಂದಿ ದುರ್ಜನರ
ವೈರವಾರಿಗು ಸಲ್ಲ ಲೋಕದಲ್ಲಿ,
ಕ್ಷುದ್ರ ಜೀವಿಗಳೆನಿಪ ಇರುವೆಗಳು ಒಗ್ಗೂಡಿ
ಉಗ್ರನಾಗವ ಪಿಡಿದು ಕೊಲ್ಲುವಲ್ತೆ !

೨೫

ಮನ್ನಿಪುದು ಮೇಧಾವಿ ಮಂದಬುದ್ಧಿಯು ಗೈವ
ತಪ್ಪುಗಳ ನಾರೈದು ತಾಳ್ಮೆಯಿಂದ,
ಸುಲಭವೇನೆಲ್ಲರೊಳು ಸುವಿವೇಕಮಂಕುರಿಸೆ
ಪುರುಷರೊಳು ಪಾಂಡಿತ್ಯ ವಿರಳವಲ್ತೆ !

೨೬

ಪೊರೆವ ಪಿತನೆಳೆತನದೆ ಯೌವನದೆ ಪತಿ ಪೊರೆವ
ಪೊರೆವ ಸುತ ಮುದಿತನದೆ ಮಾತೆಯರನು,
ಶೀಲವತಿ ಸತಿ ಬಯಸಳೆಂದಿಗುಂ ಸ್ವಾತಂತ್ರ್ಯ
ಮಾನವೇ ಮಾತೆಯರ ಜೀವಮಲ್ತೆ !

೨೭

ನಾರಿಯರು ನಲಿವಲ್ಲಿ ಸುರಲೋಕವೊಲಿಯುವುದು
ನಾರಿ ಕಾರಣ ನಾಕ ನರಕಗಳಿಗೆ,
ಸಂಸಾರ ಸಾಗರವ ದಾಂಟಿಸುವ ನಾವೆಯದು
ನಾರಿಯೊಲಿವುದು ನರನ ಪುಣ್ಯಮಲ್ತೆ !

೨೮

ಆಟೋಪದಿಂದೈದಿ ಸೋತು ಬರ್ಪುದು ಟಗರು
ಸಂಕುಚಿಸಿ ಮುನ್ನುಗ್ಗಿ ಸಿಂಹ ಗೆಲ್ಗುಂ,
ಆಡಂಬರವ ತೊರೆದು ಹಿಡಿದ ಕಾರ್ಯವ ಬಿಡದೆ
ಸಾಧಿಪಂ ಸುವಿವೇಕಿ ತಾಳ್ಮೆಯಿಂದಂ

೨೯

ಕೈಹಾಕದಿರು ಕಂಡ್ಯ ತನಗೆ ಸಲ್ಲದ ಕೃತಿಗೆ
ಹಾಕಿದೊಡೆ ಕಾಯ್ದಿಹುದು ಮಿಳ್ತು ಬಳಿಯೊಳ್,
ಬಡಗಿ ಕೊಯ್ದಿಟ್ಟಿರ್ದ ಬೆಣೆ ಕಿತ್ತು ಚಪಲ ಕಪಿ
ವೃಷಣ ಸಿಕ್ಕಿಸಿಕೊಂಡು ಮಡಿದುದಲ್ತೆ !

೩೦

ಕೊಟ್ಟು ಹುಟ್ಟದ ನರಗೆ ಗಿಟ್ಟುವುದೆ ಸಂಪದಂ
ಎಂಬ ಹಿರಿಯರ ನುಡಿಯದೆಷ್ಟು ತಥ್ಯಂ,
ನೆಲವೆಲ್ಲ ಜಲತುಂಬಿ ತುಳುಕಿದರು ಚಾತಕಕೆ
ಮರುಭೂಮಿಯೆನಿಸಿರ್ಪುದಷ್ಟೆ ಸತ್ಯಂ !

೩೧

ತಂದೆಯಂ ನಿಂದಿಪನೆ ಜಾರಜನುಮಲ್ಲದೊಡೆ
ದೂಷಿಪಳೆ ಗಂಡನಂ ದೋಷರಹಿತಳ್
ವ್ಯಾಮೋಹಮಿಲ್ಲದವನಧಿಕಾರಕಾಶಿಪನೆ
ಗೈವನೇಂ ಸೊಗಸನಿಷ್ಕಾಮಿ ಮಹಿಯೊಳ್.

೩೨

ಕೊಂಬೆ ಕೊಂಬೆಗೆ ನೆಗೆವ ಕಪಿ ಕಡಲ ದಾಂಟದುದು
ಹಿರಿಯ ಹರಕೆಯ ಹೊರತು ಬೇರೆಯಲ್ತು,
ಮಹಿತರಾಶಿಷಗೊಂಡ ತೃಣಪುರುಷನಾದರುಂ
ಮೇರುಗಿರಿಶಿಖರಮಂ ತರುವನಲ್ತೆ!

೩೩

ತೃಣಕೆ ಸಮ ಸಗ್ಗಮಿದು ಬೊಮ್ಮನಂ ಬಲ್ಲವಗೆ
ಜೀವನಂ ತೃಣಕೆ ಸಮ ಧೀರ ನರಗೆ,
ತೃಣಕೆ ಸಮ ನಾರಿಯರ್ ವಿಜಿತೇಂದ್ರಿಯಂಗೆಲ್ಲ
ವಿಶ್ವಮುಂ ತೃಣಕೆ ಸಮ ನಿಸ್ಪೃಹಂಗೆ.

೩೪

ತನ್ನಳವನರಿಯದಲೆ ಬಲವಂತನೆದುರಿಸಿದ
ಮತಿಹೀನ ಮಹಿಯೊಳಗೆ ಮಣ್ಣುಕ್ಕುವಂ,
ತ್ರಿಪುರಹರ ನೆದುರಿನಲಿ ಬೀರಮಂ ಬೀರಿದಾ
ಕುಸುಮಶರ ವಿಲಯಮಂ ಪಡೆದ ತೆರದೆ.

೩೫

ದೇಶಕಾಲದ ಪರಿಯ ಕಾರ್ಯಕಾರಣದಿರವ
ನಳಿದು ನಡೆವನೆ ಜಾಣನಿಳೆಯೊಳೆಂದುಂ,
ಕೇಳಿಯುಂ ಕಿವುಡನೊಲು ಕಂಡರುಂ ಕುರುಡನೊಲು
ತಿಳಿದರುಂ ಜಡನಂತೆ ನಡೆವುದೆನಿತುಂ,

೩೬

ತನಗೆ ಬೇಕಾದಲ್ಲಿ ಕಲ್ಲು ಪೀಠಕೆ ಬಕ್ಕು
ನವರತ್ನ ಶಿಲೆಯಕ್ಕು ಬೇಡವಾಗೆ,
ದಿನದಿನಕೆ ಬದಲಿಸುವ ಸರಕಾರ ನೀತಿಯಲಿ
ಬೇಲೆಯುಂಟೆ ಯೋಗ್ಯತೆಗೆ ನ್ಯಾಯವಾಗಿ.

೩೭

ದುಡಿಯುವರ ಕೆಳ ತುಳಿದು ಸೇವೆಯಂ ಕಡೆಗಣಿಸಿ
ಕಿರುಕುಳುವ ಕೊಡುವುದೇ ನೀತಿಯೆಂದು,
ಮೆರೆಯುವಧಿಕಾರಿಗಳ ದರ್ಪರಂಗದ ಮೇಲೆ
ಕುಣಿಯುತಿದೆ ಪ್ರಭುಶಕ್ತಿ ಜಗದೊಳಿಂದು,

೩೮

ಅಭಿಮಾನಿಗಳು ಕೂಡಿ ಮುಳ್ಹಂದಿ ಜೈಯೆನಲು
ಘೋಷಣೆಯನಾಲಿಸಿದ ಸರ್ವಕಾರ,
ಕರೆದವನ ಗೌರವಿಸಿ ಬಿರುದು ಬಾವಲಿಯಿತ್ತು
ಘೋಷಿಪುದು ಗುಣಕಲ್ಲಿ ಸಂಚಕಾರ.

೩೯

ಹೊಳೆಯ ತಡಿಯೊಳು ನಿದ್ದೆ, ಪೆಂಡಿರನ್ಯರ ವಶದೆ
ಮಾತು ಮೀರುವ ಮಗಂ ಮನೆಯೊಳಿರಲು
ಬಡಪಾಯಿ ಬದುಕಿಗಿಂ ಮರಣಮೇ ಮಾನವಮಿ
ಕಡೆಹಾಯಿಸವನ ಮೃಡ ಕರುಣೆಯಿರದ

೪೦

ಶ್ರೋತೃವಿಲ್ಲದ ಮೇಲೆ ವಕ್ತೃವೇಂ ಗೈದಪಂ
ಚಿತ್ತಲೆಯ ನಾಡಿನೊಳಗಗಸನುಂಟೆ ?
ಕಗ್ಗಲ್ಲ ನೆಲದೊಳಗೆ ರಸದ ಹೊಳೆ ಹರಿದೇನು
ನೆಗ್ಗಲೊಳ್ ಜ್ಞಾನಗಜ ನಡೆವುದುಂಟೆ ?

೪೧

ಕಲ್ಲು ಜಿಗಿವುದು ನೀರ ಹುಲ್ಲು ಕೆಯ್ ಮೇಯುವುದು
ಮಲ್ಲಯುದ್ಧದಿ ಹೆಳವ ಗೆದ್ದನೆಂದು,
ಸಲ್ಲದುದ ನುಡಿಯುದಿರು ಬಲ್ಲವರ ಬಳಿಯಲ್ಲಿ
ಮಲ್ಲಿಕಾರ್ಜನನೊಲ್ಲನಲ್ಲದುಪನು.

೪೨

ಮಿಸುನಿ ಮುಜ್ಜ್ವಳದಿಂದ ಮರೆಯಾದ ನಿಜವನ್ನು
ದಿನಪ ತೆರೆದಿದ ಜಗಕೆ ತೋರುವಂತೆ,
ಜನದೆದೆಯ ಗವಿಯಲ್ಲಿ ಮಸಕಾದ ಚೇತನವ
ದೀಪಗಳ ಸಿಂಗರಿಸಿ ಬೆಳಗಬಾರ !

೪೩

ರೂಪ ನರನಿಗೆ ಭೂಷಣಂ
ಗುಣವು ರೂಪಕೆ ಭೂಷಣಂ,
ಗುಣಕೆ ತಿಳಿವೇ ಭೂಷಣಂ
ಕ್ಷಮೆಯು ತಿಳಿವಿಗೆ ಭೂಷಣಂ

೪೪

ತಿಳಿವಿಲ್ಲದೆಯೆ ಬಾಲ್ಯ ಕಳೆಯುವುದು ಮಾನವಗೆ
ಬೆಳೆವಾಗ ಬೇಕುಗಳು ಕಾಡುತಿಹವು,
ಹರಯದಲಿ ಕಾಮದುನ್ಮಾದ ಕಡಲಿನ ಸೆಳೆತ
ಮತಿವಿಕಲ ಮುದಿತನದೆ ಸುಖಿವುದೆಂದು ?

೪೫

ಹೊಸವಸ್ತ್ರ ಹೊಸಶಸ್ತ್ರ ಹೊಸ ವನಿತೆ ಹಿತಕರವು
ಸುಖವು ಹೊಸಮನೆ ವಾಸ ಮಾನವರಿಗೆ,
ಹೊಸತೆಲ್ಲವಾದರುಂ ಮನೆಹಿತವ ಬಯಸುವೊಡೆ
ಸುವಿವೇಕಿ ಸೇವಕಂ ಹಳಬ ಲೇಸು.

೪೬

ಬಾಲರವಿ ಮೆಟ್ಟುವನು ಪಾದದಿಂ ಗಿರಿಶಿಖರ
ಶಿವಕುವರ ತಾರಕನ ಮೆಟ್ಟಿದಂತೆ,
ವಯಸಿನಂತರವೇನು ಪದವಿಗಳ ಹಂಗೇನು
ತೇಜಸ್ವಿಗಿದಿರುಂಟೆ ಲೋಕದಲ್ಲಿ ?

೪೭

ಕಂಗೊಳಿಪ ಕೂಪಗಳು ಕೊಳ-ಹೊಳೆಯು-ಕಡಲುಗಳು
ತುಂಬಿರ್ದರುಂ ಜಗದಿ ಚಾದಗೆಗಳ
ನೀರಡಿಕೆ ನಂದಿಸುವ ನವಜಲದಬಿಂದುವ್ರತ
ಫಲಿಸುವುದೆ ನವ ಜಲದವುದಿಸದಿರಲು

೪೮

ರತ್ನರಾಶಿಗಳಿಂದ ಮುತ್ತು ಮಾಣಿಕದಿಂದ
ತುಂಬಿರ್ದರುಂ ಕಡಲಿಗಿಲ್ಲ ಮದವು,
ಹಲ ಕೆಲವು ಮುತ್ತುಗಳ ಪೊಂದಿದಾನೆಗಳಿಂದು
ಮದ್ದಾನೆ ತಾವೆಂದು ಬೀಗುತಿಹವು.

೪೯

ನೂರಾರು ಬಕಪಕ್ಷಿ ತೀರದಲಿ ಕುಳಿತರುಂ
ಕೊಳದ ಬೆಳಗಿಸೆ ಹಂಸವೊಂದೆ ಸಾಕು,
ಸರಸೋಕ್ತಿಗಳನಾಡಿ ರಸಿಕಸಭೆ ಬೆಳಗಿಸಲು
ಸರಸಕವಿಯುಚಿತಜ್ಞನೊಬ್ಬ ಬೇಕು.

೫೦

ಬಹುಸಹಾಯವ ಪಡೆದ ನರನಲ್ಪನಾದರುಂ
ಸುಲಭದಿಂ ಕಾರ್ಯಮುಂ ಸಾಧಿಸುವನು,
ಹಳ್ಳಕಿರಿದಾದರುಂ ಹಿರಿಯ ಹೊಳೆಯಂ ಸೇರಿ
ಸಡಗರದೆ ಕಡಲನುರೆ ಸಾರುವಂತೆ

೫೧

ಅರಸಂಚೆ ಬೆಳಗುವುದು ಕಮಲವನ ಮಧ್ಯದಲಿ
ಗಿರಿಗುಹೆಗಳೊಳು ಸಿಂಹ ಶೋಭಿಸುವುದು,
ಬೆಳಗುವುದು ಜಾತ್ಯಶ್ವ ರಣಬುವಿಯ ಕಣದಲ್ಲಿ
ಬುಧವರಂ ಸುವಿವೇಕಿ ಪುರುಷರಲ್ಲಿ.

೫೨

ಅರಸಂಚೆ ಶೋಭಿಪುದೆ ಕಾಗೆಗಳ ಮಧ್ಯದಲಿ
ಕೇಸರಿಯು ಬೆಳಗುವುದೆ ನರಿಗಳಲ್ಲಿ,
ಜಾತ್ಯಶ್ವ ಶೋಭಿಪುದೆ ಕತ್ತೆಗಳ ಮಧ್ಯದಲಿ,
ಗಾವಿಲರ ಸನಿಹದಲಿ ವಿಬುಧವರನು

೫೩

ಋತು ವಸಂತವು ಕಳೆಯೆ ಕೋಗಿಲೆಯ ರುತವೇಕೆ ?
ಭೀರುವಿಗೆ ಶಸ್ತ್ರಾಸ್ತ್ರಗೊಡೆವೆ ಏಕೆ ?
ದುರ್ವ್ಯಸನಿಗೇತಕ್ಕೆ ಸನ್ಮಿತ್ರರುಪದೇಶ
ವಿದ್ಯೆಯಿಲ್ಲದ ನರನ ಬಾಳ್ವೆಯೇಕೆ ?

೫೪

ನೀಚನಾಢ್ಯನಾಗೆ ಯವನ ನೀಚ ಸೇವಿಪನ್
ಮಹಿತನವನ ನೆರೆಯ ತೊರೆದು ದೂರ ಸರಿಯುವನ್,
ಬೇವು ಫಲಿಸೆ ಕಾಗೆಯಂತೆ ಅಂಚೆ ಸರಿವುದೇಂ ;
ಸಾವು ಬರಲು ಸನಿಹಕ್ಕೈದಿ ಸೇವೆ ಗೈವರಾರ್ ?

೫೫

ಆದರಿಸುವವರಾರು ದಿನದಿನಂ ಬರುವವರ
ಅತಿಯಾಗೆ ಪರಿಚಯಂ ಕಡೆಗಣಿಕೆಯು,
ಮಲೆಸೀಮೆ ಬೇಡತಿಯು ಗಂಧಸೌವೆಯ್ಯುನೊಲೆಗೆ
ಅಟ್ಟುವಳು ಮುದದಿಟ್ಟು ಯೋಚಿಸದೆಯೆ.

೫೭

ಬಹುದಿನದ ಬಯಕೆಗಳು ಬಹುದೂರ ಸರಿಯುವವು,
ಬಯಸದಿರ್ಪವು ತಾವೆ ಮುಂದೆ ಬಹವು;
ಇಂತು ವಿಧಿವಿಲಸಿತವ ಮನಗಂಡು ಸಜ್ಜನರು
ಸುರಸರಿತ್ತಟಕೈದಿ ವಿರತರಹರು.

೫೮

ಮರು ಬುವಿಯ ಮಧ್ಯದಲಿ ಬುಡಜೆಂದು ವಣಗಿರುವ
ಚಂಪಕಕೆ ಚಿಗುರೊಡೆವ ಚಿಂತೆಯುಂಟೆ ?
ಅನುಚಿತದ ನೆಲೆಯಲ್ಲಿ ಅಗಚಾಟ್ಲುಪಡುತಿರುವ
ಸುಜನರಿಗೆ ಶ್ರೇಯಸ್ಸಿನಾಶೆಯೇಕೆ ?

೫೮

ಉಚಿತವೊ ಅನುಚಿತವೊ ಕಾರ್ಯದಲಿ ತೊಡಗಿರುವ
ವಿಬುಧನಿಗೆ ಪರಿಣಾಮದರಿವು ಬೇಕು ?
ಅವಸರದೊಳೆಸಗಿರ್ಪ ಕೃತಿಯ ವಿಪದಗಳೆಲ್ಲ
ಮುಳ್ಳಿನೊಲು ಕಡೆತನಕ ನೋಯಿಸುವುವು.

೫೯

ದೈವಜ್ಞರಿರದೂರು ವಿಬುಧರಿಲ್ಲದ ಸಭೆಯು
ಶ್ರುತಿಯ ನರಿಯದ ಮುಖವು ಶೂನ್ಯಗೃಹವು,
ವಕ್ತೃವಲ್ಲದ ಗುರುವ ಗಯ್ಯಾಳಿ ಹೆಂಡತಿಯ
ತೊರೆಯದನ ಜಾಣನೆಂದೆನುವರಿಹರೆ ?

೬೦

ಸಾಣೆಸಿದ ಮಣಿಗಣವು ಸಣ್ಣಾದ ಶರದ ನದಿ
ಮದವಳಿದ ಗಜಪತಿಯು ಸಮರವಿಜಯಿ,
ಕಲೆಯುಳಿದ ಚಂದ್ರಮಂ ಸುಸಿಲ ಬಳಲಿದ ಬಾಲೆ
ಕೊಟ್ಟು ಬಡವಾದರಸ ಬೆಳಗದಿಹನೆ ?

೬೧

ಅನೃತ ನುಡಿವುದಕಿಂತ ಮೌನವಿರ್ಪುದೆ ಲೇಸು
ಪರಸತಿಯ ಸಂಗಕಿಂ ಕ್ಲೈಬ್ಯ ಲೇಸು,
ಪಿಸುಣರೊಡನಾಟಕಿಂದಸು ತೊರೆವುದೇ ಲೇಸು
ತಿರಿದುಂಬುದೇ ಲೇಸು ಪರರೊಡವೆಗಿಂ.

೬೨

ಅಗಡುದನಗಳಿಗಿಂತ ಬರಿಮನೆಯ ನೆರೆ ಲೇಸು
ಅವಿನೀತೆ ಸತಿಗಿಂತ ವೇಶ್ಯೆ ಲೇಸು.
ದುಷ್ಟದೊರೆ ಪುರಕಿಂತ ಕಗ್ಗಾಡು ಕಪು ಲೇಸು
ಅಧಮರನುನಯಕಿಂತ ಸಾವು ಲೇಸು!

೬೩

ನಭಕೆ ನೇಸರ ದುಂಬಿ ಕಮಲಕೆ ಸತ್ಯವಾಕ್ಕಿಗೆ ಭೂಷಣಂ
ದಾನ ವಿಭವಕೆ ಮೈತ್ರಿ ಮನಸಿಗೆ ಮಧು ವಸಂತಕೆ, ಭೂಷಣಂ
ಸೂಕ್ತಿ ಸಾಧುಗೆ ವಿನಯ ಸದ್ಗುಣ ಜಾಲಕೆಲ್ಲಕೆ ಭೂಷಣಂ
ವಿದ್ಯೆ ಮನುಜಗೆ ಶುದ್ಧಭಾವಕೆ ದೈವ ಭಕ್ತಿಯೆ ಭೂಷಣಂ

೬೪

ಸಕಲ ಸದ್ಗುಣ ಸೀಮೆ ವಿತರಣ ; ಕಲೆಯ ಸೀಮೆಯೆ ಕಾವ್ಯವು
ಭಯಕೆ ಮರಣವೆ ಸೀಮೆಯೈಹಿಕ ಸುಖಕೆ ಸುದತಿಯೆ ಸೀಮೆಯು
ತಪಕೆ ಮುಕುತಿಯು ಸೀಮೆ, ಶಾಸ್ತ್ರಕೆ ಸೀಮೆ ಶ್ರುತಿತತಿಸಂಪದಂ
ಪ್ರಿಯಕೆ ಮೋದವು ಸೀಮೆ ಶ್ರವಣಕೆ ದೈವಭಜನೆಯೆ ಸೀಮೆಯು

೬೫

ಅಕ್ಷರವಿಲ್ಲದ ಮುಖವು ಕಮಲವಿಲ್ಲದ ಕೊಳವು
ಕಳೆದ ಯೌವನ ವನಿತೆ ಯಾಸೆಬುರುಕಂ,
ಹಗಲಿನಲ್ಲಿನ ಶಶಿಯು ರಾಜ ಸಂಗತ ಖಲನು
ಕಷ್ಟದಲ್ಲಿಹ ಸುಜನರಿಗುಂಟೆ ಕಳೆಯು.

೧೬

ಜಗದಿ ವಿಬುಧರು ವಿದ್ಯೆತೀರ್ಥದಿ, ಸತ್ಯ ತೀರ್ಥದಿ ಸಾಧುಗಳ್
ಮಲಿನಮಾನಸ ಗಂಗೆ ಜಲದಲಿ ಧ್ಯಾನತೀರ್ಥದಿ ಯೋಗಿಗಳ್,
ಶಸ್ತ್ರಧಾರೆಯ ಜಲದೆ ಕ್ಷತ್ರಿಯ ದಾನ ಜಲದೊಳುದಾರಿಗಳ್
ಲಜ್ಜೆ ತೀರ್ಥದೆ ಕುಲಜ ಯುವತಿಯು ಪಾಪಪಂಕವ ತೊಳೆದಪರ್

೧೭

ಚಳಿಯು ಕಳೆಯೆ ವಸ್ತ್ರದಾಸೆ ಹಗಲು ಕಳೆಯೆ ಭೋಜನಂ
ನಿಶೆಯು ಕಳೆಯೆ ಯುವತಿಮೋಹ ಪ್ರಾಯ ಕಳೆಯೆ ಮದುವೆಯು,
ನೀರು ಹರಿಯೆ ಸೇತುಬಂಧ ಮುದುಪತನದೆ ಯಾತ್ರೆಯು
ವಿತ್ತವಳಿಯೆ ದಾನಬುದ್ಧಿ ಮೂಡುತಿಹವು ಮೂಢರೊಳ್.

೧೮

ತನು ದಾರ್ಢ್ಯಮಿರುವನ್ನ ವಾರ್ಧಕ್ಯ ಬರದನ್ನ
ಕರಣಶಕ್ತಿಯುಮಾಯು ಮುಗಿವ ಮುನ್ನ
ಆತ್ಮಶ್ರೇಯಕೆ ಯತ್ನಮಾಡುವನೆ ಮತಿಯುತಂ
ಮನೆ ಹತ್ತಿದೊಡೆ ಕೂಪ ಖನನವೇಕೆ ?

೧೯

ಮಿತ್ರನುಂ ಮೈತ್ರಿಯಿಂ ಶತ್ರುವುಂ ನಯದಿಂದೆ
ಧನದೆ ಲೋಭಿಯು ಪ್ರಭುವು ಸೇವೆಯಿಂದೆ,
ಸುತಿ ನತಿಗಳಿಂ ಗುರುವು ನಲ್ಮೆಯಿಂ ನಾರಿಯರು.
ಶೀಲದಿಂ ಸಕಲರುಂ ವಶವರ್ತಿಗಳ್.

೨೦

ದುರ್ಮಂತ್ರದಿಂ ನೃಪನು ದುಸ್ಸಂಗದಿಂ ಯತಿಯು
ಸುತನು ಲಾಲನೆಯಿಂದೆ ಕೃಷಿಯುಪೇಕ್ಷೆ-
ಖಲಸಂಗದಿಂ ಶೀಲ ಕುಸುತನಿಂ ಸತ್ಕುಲವು
ಅವಿವೇಕದಿಂ ಧನವು ಕೆಡುಗುಮಿಳೆಯೊಳ್.

೭೧

ತ್ಯಜಿಸುವುವು ವೃಕ್ಷಗಳ ಪರ್ಣಮುಗಿಯೆ ಪಕ್ಕಿಗಳು
ಒಣಗಿರುವ ಕೊಳಗಳಂ ಸಾರಸಗಳು
ಧನರಹಿತ ಪುರುಷನಂ ತೊರೆಯುವರು ಗಣಿಕೆಯರು
ಹಳೆಯ ಹೂಗಳ ದುಂಬಿ ಬಳಗ ಬಿಡುಗುಂ.

೭೨

ಕಾಡ್ಗಿಚ್ಚಿನಿಂಬೆಂದ ಕಗ್ಗಾಡ ಮೃಗಕುಲವು
ಭ್ರಷ್ಟನರಸನ ಮಂತ್ರಿವರರು ಬಿಡುವರ್
ಕಾರ್ಯವಶದಿಂದಲ್ತೆ ಸೇವಿಪರು ದಿನದಿನಂ
ಇಲ್ಲ ಒಲವಾರಿಗುಂ ಹೃದಯದಿಂದೆ,

೭೩

ತಿರುಕನಿರೆ ತೃಣವೇಕೆ ಸಂತರಿರೆ ಸುಧೆಯೇಕೆ ?
ಖಲರ ನೆರೆಯೊಳು ಕಾಲಕೂಟವೇಕೆ ?
ಪ್ರಿಯೆ ಹಾದಿಯಲಿ ಬರಲು ಕಣ್ಗೆ ಕಪ್ಪುರವೇಕೆ ?
ಕಲ್ಪಕುಜವೇತಕ್ಕೆ ದಾತನಿರಲು?

೭೪ ೭೫

ಸಚ್ಚರಿತ ಸುತನಾಗೆ ಸತಿಯು ನಚ್ಚಿನಳಾಗೆ
ಸುಪ್ರಸನ್ನರುಮಾಗೆ ಒಡೆಯರುಗಳು
ಮನವು ನಿರ್ಮಲವಾಗೆ ಮಿತ್ರರುಂ ಹಿತರಾಗೆ
ವಂಚಕರುಮಲ್ಲದಿರೆ ಪರಿಜನಗಳು

+

ವಪುವು ಸುಂದರಮಾಗೆ ವೈಭವಂ ಸ್ಥಿರಮಾಗೆ
ಮುಖದಲ್ಲಿ ಸದ್ವಿದ್ಯೆ ಚಿಮ್ಮುತಿರಲು,
ಸದ್ಭಕ್ತಿಗೊಲಿದ ಹರ ನಿಷ್ಪಾರ್ಥ ನೀಡುತಿರೆ
ಸಗ್ಗಮಾಗುವುದೈಸೆ ಧರೆಯೆ ನರಗೆ.

೭೬

ಕುಲಜನಂ ದುಷ್ಕುಲರು ಶ್ರೀಯುತನ ದುರ್ಭಗರು
ದೂಷಿಸರು ದಾತೃವಂ ಕೃಪಣಜನರು,
ಧನದನಂ ನಿರ್ಧನರು ಧಾರ್ಮಿಕನ ಪಾಪಿಗಳು
ನಿಂದಿಪರು ಪಂಡಿತನ ಮೂಢಜನರು.

೭೭

ರಾವಣಂ ಪರಸತಿಯ ಹರಣ ಪಾಪಮಿದೆಂದು
ದಿಟವೆಂದು ರಾಘವಂ ಸ್ವರ್ಣಮೃಗವ,
ಜೂಜು ದೋಷಮಿದೆಂದು ಬಗೆದನೇಂ ಧರ್ಮಜಂ
ವಿಪದವುಡಸಿದ ನರಗೆ ಮತಿಯುಮುಂಟೆ ?

೭೮

ರಾಜನೀತಿಯ ಕುಶಲ ನರನು ಧಾರ್ಮಿಕನಕ್ಕು
ವೇದವಿದ ಶಾಸ್ತ್ರಜ್ಞ ಶಾಸ್ತ್ರಿಯಕ್ಕು,
ರೂಪಯೌವನಶೀಲೆ ಕಾಮಿನಿಯು ಸತಿಯಹಳೆ
ಸೋಜಿಗಂ ನಿರ್ಧನಂ ಪಾಪರಹಿತಂ

೭೯

ಚೋರ ಚಂದ್ರನ ಜರೆವ ಜಾರ ಗೃಹಪತಿ ಜರೆವ
ಸಭ್ಯನಂ ಖಲನ ಸತಿಪತಿಯ ಜರೆವಳ್
ಅಕುಲ ಕುಲಜನ ಜರೆವ ಯುವಕ ಮುದುಕನ ಜರೆವ
ಅಬುಧ ವಿಬುಧನ ಜರೆವ ಮರೆಯದಿಳೆಯೊಳ್,

೮೦

ಗಜವು ಮದದಿಂ ಜಲವು ಕಮಲದಿ ಚಂದ್ರನಂ ನಿಶಿ ರಂಜಿಕುಂ
ಪ್ರಮದೆ ಶೀಲದಿ ತುರಗ ವೇಗದಿ ಮನೆಯು ಮಂಗಳ ಕಾರ್ಯದಿಂ
ನದಿಯು ಹಂಸದೆ ಸಭೆಯು ವಿಬುಧರ ವಾಣಿಯಿಂ ಪರಿಶೋಭಿ
ಕುಲವು ಸುತನಿಂ ವಸುಧೆ ನೃಪನಿಂ ಲೋಕ ದೈವದೆ ರಾಜಿಕುಂಕಂ

೮೧

ಸಸ್ಯಗಳ ನೆಲ ಮೆಲಲು ಮಾತೆ ಮಗನಂ ಕೊಲಲು
ಕಡಲೆಲ್ಲೆ ದಾಂಟಬರೆ ನೆಲವು ಸುಡಲು,
ನಭ ತಲೆಯ ಮೇಲೆರಗೆ ತಿನಿಸೆಲ್ಲವಿಷವಾಗೆ
ಅನ್ಯಾಯವೆಸಗೆ ನೃಪ ತಡೆವರಾರು ?

೮೨

ಸಂಪದಗಳೊದಗಿದವು ಕಾಮನೆಯು ಫಲಿಸಿಹದು
ಶತ್ರುಮಸ್ತಕ ಮೆಟ್ಟಯಾಯ್ತು ಮುಂದೆ,
ತಣಿದರ್ಪೆ ಪ್ರಿಯಜನರುಮಾಳಲ್ಪ ಬದುಕಾಯ್ತು
ಮುಂಪೇನು ಮುಂದೇನು ಪೇಳು ಮರುಳ !

೮೩

ಸ್ತ್ರಹತ ರಿಪುವಿತತಿ ಹತವಲ್ಲ ಪರಿಕಿಸಲು
ನೀತಿಹತರಾದವರೆ ಹತರು ಜಗದಿ,
ಶಸ್ತ್ರ ಪುರುಷನ ವಪುವನೊಂದನೇ ಕೊಲ್ಲುವುದು
ನಿರ್ನೀತಿ, ಕುಲ ಸತ್ಕೀರ್ತಿ ವಿಭವವೆಲ್ಲಂ

೮೪

ಅರ್ಥ ತನ್ನದು ಎಂದು ಬೀಗುತಿಹ ಜಿಪುಣನಂ
ಭೂಮಿ ತನ್ನದು ಎನುವ ಭೂಪನನ್ನು,
ತನಯರೆನ್ನವರೆಂಬ ಪತಿಯ ಜಾರಿಣಿಯಂತೆ
ನಗುತಿರ್ಪ್ಪೈ ಮೃತ್ಯು ಭೀರು ನೃಪನಂ

೮೫

ಕೃತಿಯಾವುದಾದರುಂ ದುಡುಕಿ ಮಾಳ್ಪುದು ಬೇಡ
ಅವಿವೇಕಕಾಸ್ಪದಂ ದೋಷಜನಕಂ,
ಹಿಂದು ಮುಂದುಗಳೆಲ್ಲ ಪರಿಕಿಸುತೆ ಮಾಳ್ಪನಂ
ಗುಣಲುಬ್ಧ ಸಂಪದಂ ತಾನೆ ಬರ್ಕುಂ

೮೬

ಪರರಿಗನುಕೂಲೆಯುಂ ಸ್ವಯಮರ್ಥಚೋರೆಯುಂ
ಜಗಳಗಂಟಿಯುನಧಿಕ ಪಚಿಸುವವಳಂ,
ನೆರೆಮನೆಯ ತಿರುಗುವಾ ಕೋಪಿಷ್ಠೆ ಪೆಂಡಿರಂ
ದಶಪುತ್ರವತಿಯನುಂ ತೊರೆವುದೊಳಿತು.

೮೭

ಮಡದಿಯುಂ ಧಿಃಕರಿಸಿ ಜಾರಿಣಿಯು ಕಾಲ್ತೊಳೆವ
ಮಕ್ಕಳಂ ಕಡೆಗಣಿಸಿ ಹೋಟಲಲೆವ;
ಕ್ಲಬ್ಬಿನಲಿ ಪಗಲಿರುಳು ಕಾಲಕಳೆವಧಮನಂ
ಕರೆದು ಪೊಡೆ ಕೆರಹರಿಯೆ ತಪನಾಡದೆ.

೮೮

ಹಳತಾದುದೆಲ್ಲವಂ ಸರಿಯೆಂದು ಬಗೆಯದಿರು
ಯಾವುದಂ ಪೊಸತೆಂದು ಪಳಿಯಬೇಡ,
ಸಂತರವಲೋಕಿಸುತೆ ಸರಿಯ ನಿರ್ಣಯಿಸುವರು
ಪೆರರೆಂದುದಂ ನುಡಿವ ಮೂಢನೆನಿಕುಂ.

೮೯

ಪಕ್ಷಿಗಳು ತರುಗಳಂ ಪೊಳೆಗಳುಂ ಸಾಗರವ
ತರುಣಿಯರು ಪತಿಗಳಂ ಪೊರ್ದಿ ಸುಖಿಪರ್;
ಎಲ್ಲವುಂ ಲೋಕದೊಳಗೊಂದೊಂದನಾಶ್ರಯಿಸೆ
ಕಾಂಚನವನಾಶ್ರಯಿಸುವೆಲ್ಲ ಗುಣಗಳ್

೯೦

ಅರ್ಧಕೊಡ ತುಳುತುಳುಕಿ ಶಬ್ದಗುಡುವಂದದಲಿ
ತುಂಬುಕೊಡ ತುಳುಕುವುದೆ ಲೋಕದಲ್ಲಿ?
ಸಕುಲೀನವಿಬುಧವರ ಗರ್ವಪಡನೆಂದಿಗುಂ
ಹರಟುವಂ ಗುಣಹೀನ ಕಡು ಮೂರ್ಖನು.

೯೧

ಉಚಿತಮಲ್ಲದ ಕಾರ್ಯ ತನ್ನವರ ವಿದ್ವೇಷ
ಬಲವಂತರೊಡನೆಸೆಪ ಸಂಘವಿನ್ನು
ಪ್ರಮದೆಯರ ವಿಶ್ವಾಸವಿವು ನಾಲ್ಕು ಲೋಕದಲಿ
ಮೃತ್ಯುದ್ವಾರಗಳೆಂದು ಪೇಳ್ವರರಿದರ್

೯೨

ಸ್ವಜನರಿಂದಪವಾದ ಭಾರ್ಯಾವಿಯೋಗಮುಂ
ಕೃಪಣಗೆಸಗಿದ ಸೇವೆ ಕಡಯುತನಕ,
ಬಡತನದೆ ಬಾಂಧವರು ಬರುವರಿಂಬಿವು ನಾಲ್ಕು
ಮೃತ್ಯುದ್ವಾರಗಳೆಂದು ಬಗೆವರರಿದರ್.

೯೩.

ವ್ರಣವ ನೊಣಬಯಸುವುದು ಧನವ ನೃಪ ಬಯಸುವನು
ಕಲಹ ಬಯಸುವರ್ಕೆಸೆ ನೀಚ ಜನರು
ಭಕ್ತಿಯಂ ಬಯಸುವರು ಭಾವುಕರು ಮಾನಸದೆ
ಶಾಂತಿ ಬಯಸುವರ್ಕೆಸೆ ಸಾಧುಜನರು,

೯೪

ಸ್ವಂತ ಗುಣಗರಿಮೆಯಿಂ ಸಂತರುರೆ ರಾಜಿಪರು
ಹಂಗಾಗರೆಂದಿಗುಂ ಪರರ ಸಿರಿಗೆ,
ಅದಿಮಿ ಮುಚ್ಚಿಡಲಳವೆ ಕಸ್ತೂರಿ ಪರಿಮಳವ
ನಿಜತೇಜ ತಂತಾನೆ ಪುಟವುದಲ್ತೆ !

೯೫

ಅರಳಿಪಂ ದಿನಕರಂ ಕಮಲವನ ಬೃಂದಮಂ
ಕುಮುದಗಳನರಳಿಪಂ ಶೀತಕರನು,
ಕೇಳದೆಯೆ ಜಲಧರಂ ಮಳೆಗರೆದು ರಕ್ಷಿಪುದು
ಸಂತರುರೆ ಪರಹಿತವ ಬಯಸರಲ್ತೆ !

೯೬

ಪಾವುಗಳ್ ಪವನಮಂ ಕುಡಿದು ದುರ್ಬಲಮಲ್ತು
ಬಲಹೀನಮಲ್ತು ಗಜ ಹುಲ್ಲು ತಿಂದು,
ಕಂದಮೂಲಗಳಿಂದೆ ಜೀವಿಪರು ಮುನಿವರರು
ಸಂತೋಷಮೋ ನರರ ಜೀವಮಾತ್ರೆ !

೯೭

ತನುವು ಕುಗ್ಗಿತು ಹಲ್ಲು ಸಡಲಿತು ಕಿವಿಯು ಕೇಳದು
ನಡಗೆ ಕೋಲಿಗೆ ಮಣಿವುದು
ತಲೆಯು ಬಿಳಿಚಿತು ಕಣ್ಣು ಕಾಣದು ಮನವು ನಾಣಿಲಿ
ವಿಷಯಗಳ ಮಿಗೆ ಬಗೆವುದು.

೯೮

ತರುಣಿಯರ ನಲಿಸುವೀ ತಾರುಣ್ಯಮಳಿದಿಹುದು
ಪಲ್ ಸಡಲಿ ನಡೆಕೋಲ್ಗೆ ಶರಣಾಯಿತು,
ಜಡಮಾಯ್ತು ತನುಯಷ್ಟಿ ಕಿವಿಕೇಳದಂತಾಯ್ತು
ಮನವು ನಾಣಿಲಿ ವಿಷಯ ಕೆಳಸುತಿಹುದು.

೯೯

ಕಾಂತೆಯರ ಕಡೆಗಣ್ಣ ಬಾಣಕಳುಕದ ಮನವು
ಕೋಪಾಗ್ನಿದಹಿಸದೀ ಚಿತ್ತವೃತ್ತಿ,
ವಿಷಯಲೋಭದ ಸೆಳೆತವಾರನುನ ಬಾಧಿಸದೊ
ಮೂಲೋಕ ವಿಜಯಿಯವನಲ್ತೆ ಜಗದಿ !

೧೦೦

ಇಂತು ಕನ್ನಡ ನುಡಿಯ ನಂದನೋದ್ಯಾನದಲಿ
ಸಂತ ಸಸಿಗಳೊಳರಳಿ ಗಮಗಮಿಸುವ,
ಬಗೆಬಗೆಯ ಸುಮಗಳಂತಿರಿತಂದು ಸರಸತಿಗೆ
ಬಾಗಿ ಪದತಲಕಿಟ್ಟನಮರವಾಣಿ

ಪಂಚಮ ಶತಕಂ

# ಕಠಿಣ ಪದಗಳ ಅರ್ಥ

ಎಸಳು-೧

೧ ಸಲಿಲಾಂಜಲಿ-ನೀರು ತುಂಬಿದ ಬೊಗಸೆ
೩ ಸುಧೆ-ಅಮೃತ
೩ ರಸವಿಸರ-ರಸೋತ್ಕರ್ಷ
೩ ಆಸ್ವಾದ-ರುಚಿ
೪ ವಿಕೃತಿ-ವಿಕಾರ
೪ ವಿರಸ-ವಿರೋಧ
೪ ಜಾಡ್ಯಹರ-ಜಡತೆಯನ್ನು ಕಳೆಯುವ
೪ ರಸೆ-ಭೂಮಿ
೫ ಪಯಣ-ಪ್ರಯಾಣ
೬ ಬಿನ್ನಬಡು-ಕಷ್ಟಪಡು
೮ ಪರಿಕರ-ಸಾಮಗ್ರಿ
೮ ಪಡಿ-ಸಮ, ಹೋಲಿಕೆ
೧೦ ಶೇಷಶಾಯಿ. ನಾಗಶಯನ (ವಿಷ್ಣು)
೧೩ ಪರಿವೆ-ವ್ಯತ್ಯಾಸ
೧೪ ಬಲ್ಪುಣಿಸು-ಹೆಚ್ಚು ಆಹಾರ
೧೪ ಸಮಯ ಶೌರ್ಯ-ಸಕಾಲದಲ್ಲಿ ಸಾಹಸ
೧೪ ಶುನಕ-ನಾಯಿ
೧೬ ಕುಕ್ಕುಟ-ಕೋಳಿ
೧೮ ದುಸ್ತರ-ದಾಟಲು ಅಸಾಧ್ಯ
೧೮ ಅಳವು-ಸಾಮರ್ಥ್ಯ
೨೧ ಧೃತಿ-ಧೈರ್ಯ
೩೦ ನೀರೋಗ-ರೋಗವಿಲ್ಲದ
೩೨ ಆಕರ್ಣಿಸು-ಕಿವಿಯಿಂದ ಕೇಳು
೩೬ ವಿಶದ-ವಿಪತ್ತು
೩೬ ಬಾಲಿಶ-ದಡ್ಡ
೩೮ ಈರಾರು-ಹನ್ನೆರಡು
೪೦ ಒರೆದ-ಹೇಳಿದ
೪೧ ಅಂಜನಗಿರಿ-ಕಪ್ಪುಬೆಟ್ಟ
೪೦ ಪೇರಿಸು-ಜೋಡಿಸು
೪೧ ಬಂಜೆಗೊಳಿಸು-ವ್ಯರ್ಥ ಮಾಡು
೪೬ ಕುಲಸೆರ್ಮೆ-ಕುಲದ ಹಿರಿತನ
೪೯ ಅಹಿತ-ಕೆಟ್ಟದ್ದು
೫೦ ಕೃಪಣ-ಜಿಪುಣ
೫೦ ನಿಕ್ಕುವ-ನಿಶ್ಚಯ
೫೨ ಅಣು-ಸ್ವಲ್ಪ
೫೩ ಸಲಿಲ-ನೀರು
೫೪ ನಿರತರು-ಆಸಕ್ತರು
೫೪ ಸಾಜ-ಸಹಜ
೫೬ ಅಸು-ಪ್ರಾಣ
೬೦ ಚಾರುಕರ-ತಂಗದಿರ (ಚಂದ್ರ)
೬೬ ಕಾರ್ಮುಗಿಲು-ಮುಂಗಾರುಮೋಡ

೬೮ ಗಡಿ–ಎಲ್ಲೆ

೭೨ ಕರ್ವು–ಕಬ್ಬು

೭೭ ವಿಪದ–ವಿಪತ್ತು

೮೨ ಶಾಲೀನ–ಸೌಜನ್ಯ ಮಾಡು

೮೭ ಮೃತ್–ಮಣ್ಣು

೯೨ ಎಸಕ–ಕೆಲಸ

೭೧ ಖಲ–ದುಷ್ಟ

೭೫ ಗರಳ–ವಿಷ

೭೭ ತವರು–ಹುಟ್ಟಿದ ಮನೆ

೮೬ ಸುಡಿಕೆಂಡ–ದಾರುಣವಾದ ಮಾತು

೮೬ ವಿಪ್ರಿಯ-ಅಹಿತ

೮೭ ಮೃತ್‌ಗಂಧ–ಮಣ್ಣಿನ ವಾಸನೆ

## ಎಸಳು–೨

೧ ದಿಗ್ವಸನ–ದಿಗಂಬರ

೧ ಬೆಸನ–ವ್ಯಸನ

೪ ಚಂದ್ರಿಕೆ–ಬೆಳದಿಂಗಳು

೬ ಆಸ್ವಾದ–ರುಚಿ

೧೧ ಸುರತ–ಸಂಭೋಗ

೧೭ ಜಾಯೆ–ಹೆಂಡತಿ

೧೮ ಅಬುಧ–ವಿದ್ವಾಂಸನಲ್ಲದವ

೧೮ ವರ್ಣ–ಅಕ್ಷರ

೧೮ ಕಲಭ–೩೦ವರ್ಷದ ಆನೆಮರಿ

೨೦ ಧೂಪ ವಾಸ–ಧೂಪ ಪ್ರಸಾರಣ

೨೩ ದಯಿತೆ–ಹೆಂಡತಿಯಾದ ಲಕ್ಷ್ಮಿ

೨೫ ಸೇಕ–ಚಿಮುಕಿಸು

೨೬ ಆಗಸ–ಆಕಾಶ

೨೯ ಅಸಿಧಾರೆ ವ್ರತ–ಖಡ್ಗದ ಅಲುಗಿನ ಮೇಲೆ ನಡೆಯುವ ವ್ರತ

೩೭ ಕರಾಘಾತ–ಕೈಹೊಡೆತ

೩೮ ಲಕುಮಿ–ಲಕ್ಷ್ಮಿ

೪೨ ಕುಪಿತ ಕಠಿಣ–ಕೋಪದಿಂದ ಕಠಿಣವಾದ

೧ ವಸನ–ಬಟ್ಟೆ

೩ ಚಿನಿವಾರ–ಅಕ್ಕಸಾಲೆ

೬ ರಸವಿಸರ–ರಸವಿಸ್ತಾರ

೧೦ ಸೌರಭ–ವಾಸನೆ

೧೫ ಅನವರತ–ಯಾವಾಗಲೂ

೧೭ ವಿಧಿವಿಹಿತ–ವಿಧ್ಯುಕ್ತವಾಗಿ

೧೮ ವಿಬುಧ–ವಿದ್ವಾಂಸ

೧೭ ಕರಭ–ಒಂಟೆ

೨೦ ಕವಿಕರ್ಮ–ಕಾವ್ಯ

೨೩ ಅಸುರನೆದೆ–ಹಿರಣ್ಯಕಶಿಪುವಿನ ಎದೆ.

೨೫ ಭುಜವನತರು–ಭುಜವೆಂಬ ಕಾಡಿನಲ್ಲಿರುವ ಮರ

೩೧ ಸೊಳ್ನುಡಿ–ಒಳ್ಳೆ ಮಾತು

೩೪ ಬಾಯಾಳಿ–ಮಾತುಗಾರ

೩೪ ಅಂಚೆ–ಹಂಸ

೩೭ ಎಳೆವೆರೆ–ಬಾಲಚಂದ್ರ

೪೦ ಅರಿಯಲರಿದು-ತಿಳಿವುದು ಕಷ್ಟ

೪೩ ಶಮ-ಶಾಂತಿ

೪೪ ತಂಪಿಸುವುದು-ತಣ್ಣಗೆಮಾಡು

೪೫ ಪೇರಾಲ–ದೊಡ್ಡ ಆಲದ ಮರ
೪೯ ಪಳಿ–ನಿಂದೆ
೫೦ ಪಜ್ಜಳಿಸು–ಪ್ರಜ್ವಲಿಸು
೫೩ ಕವಲು ನುಡಿ–ಎರಡರ್ಥದ ಮಾತು
೫೪ ಒಳಲು–ಪ್ರದೇಶ
೫೫ ಪಗ್ಗ-ಹಗ್ಗ
೫೫ ಸಾಬಿ–ಸಾರಥಿ
೫೫ ಕಾಲಿಲಿ-ಕಾಲಿಲ್ಲದ (ಅರುಣ)
೫೭ ಬಿಜ್ಜೆ-ವಿದ್ಯೆ
೬೨ ಅಣಂ-ಸ್ವಲ್ಪ
೬೬ ಇನಿಸು–ಸ್ವಲ್ಪ
೭೨ ರಸೆ-ಭೂಮಿ
೮೨ ನನ್ನಿ-ಸ್ನೇಹ
೮೫ ಕಸವರ-ಚಿನ್ನ
೮೭ ಅನುನಯ–ವಿಶ್ವಾಸ
೯೫ ನವಿರೇರು–ರೋಮಾಂಚನವಾಗು
೪೯ ಗೆಳವೆ–ಗೆಳೆತನ
೪೯ ಮುಕುರ–ಕನ್ನಡಿ
೫೦ ಎಲರ್–ಗಾಳಿ
೫೪ ಬೊಮ್ಮವೊಮ್ಮಗ-ರಾವಣ
೫೫ ನೆಲವಿಲಿ-ನೆಲವಿಲ್ಲದ (ಗಗನ)
೫೬ ವಡಬ-ಬಡಬಾಗ್ನಿ
೬೦ ಆರೈದು–ವಿಚಾರ ಮಾಡಿ
೬೮ ಇಸೆ–ಎಸೆ
೭೭ ದಾರುಣಾಗ್ರೇಸರ–ಅತಿಕ್ರೂರಿ
೮೭ ಆಳವ್ರು–ಶಕ್ತಿ
೯೨ ಸಪರಿಗ್ರಹ-ಸಪತ್ನೀಕ
೯೮ ಅರಸಂಚೆ-ರಾಜಹಂಸ

ಎಸಳು—೩

೬ ತಕ್ರ–ಮಜ್ಜಿಗೆ
೨೧ ನೀರಧಿ–ಸಮುದ್ರ
೨೬ ಒರೆದದ್ದು–ಹೇಳಿದ್ದು
೫೨ ಅಂತರಾಯ-ವಿಘ್ನ
೭೬ ನೀರೆ–ಹೆಂಗಸು
೮೯ ಬೆನಕ-ವಿನಾಯಕ
೯೭ ದಳ್ಳುರಿ–ಕಾಡ್ಗಿಚ್ಚು
೧೩ ಕೃತಕಾರ್ಯ-ಕೆಲಸ ಮುಗಿಸಿದವನು
೪೯ ಕೇತು–ಬಾವುಟ
೫೩ ಗುಡಿ-ಬಾವುಟ
೮೪ ಮುನ್ನೀರು–ಸಮುದ್ರ
೮೯ ಮಾರ್ಜಾಲ-ಬೆಕ್ಕು

ಎಸಳು—೪

೧ ಪದಪಂಕಜ–ಪಾದಕಮಲ

೧ ಕಲ್ಲನೇರಿಸು-ಮದುವೆ ಸಪ್ತಪದಿಯಲ್ಲಿ ವಧುವನ್ನು ಕಲ್ಲಮೇಲೆ ನಿಲ್ಲಿಸುವುದು

೨೦ ಎಡರು-ತೊಂದರೆ

೬೪ ಓಜೆವರ-ಒಳ್ಳೆಯ ಉಪಾಧ್ಯಾಯ

೭೨ ಕೈದು-ಆಯುಧ

೮೦ ನನ್ನಿ ಕಾರಂಜಿ-ಸ್ನೇಹದ ಬುಗ್ಗೆ

೮೩ ಉರಗ-ಹಾವು

೯೫ ಕಾಸಾರ-ಕೊಳ

೯೮ ವಕ್ತೃ-ಮಾತನಾಡುವವ

೯೯ ಕೆಯ್-ಬೆಳೆ

೯ ಅದ್ರವ್ಯ-ಕೆಲಸಕ್ಕೆ ಬಾರದ

೬೩ ಗುಣಗರಿಮೆ-ಗುಣದ ಹೆಚ್ಚುಗಾರಿಕೆ

೭೬ ಕಾಕತಾಳೀಯ-ಕಾಗೆ ಬರುವುದೂ ತಾಳೆ ಹಣ್ಣು ಬೀಳುವುದೂ ಕಾಕತಾಳ; ಬಿದ್ದ ತಾಳೆ ಹಣ್ಣು ಒಡೆದು ಅದನ್ನು ಕಾಗೆ ತಿನ್ನುವುದು ಕಾಕ ತಾಳೀಯ (ಇದೊಂದು ನ್ಯಾಯ)

## ಎಸಳು—೫

೧ ಶೇಷ-ಆದಿಶೇಷ (ಸರ್ಪ)

೯ ಅಳಿ-ದುಂಬಿ

೨೦ ಪರಿಪೂತ-ಪವಿತ್ರ

೨೨ ಪಳಿವು-ನಿಂದೆ

೪೦ ಶ್ರೋತೃ-ಆಲಿಸುವವನು

೪೧ ಜಿಗಿ-ಹಾರು

೪೪ ಬೇಕುಗಳು-ಆಸೆಗಳು

೪೮ ನವಜಲದ ಬಿಂದು ವ್ರತ-ನೆಲಕ್ಕೆ ಬೀಳದ ಮೇಘದ ಜಲವನ್ನೆ ಕುಡಿವ ವ್ರತ

೫೪ ಆಢ್ಯ-ಸಿರಿವಂತ

೫೬ ಸುರಸರಿತ್ತಟ-ದೇವಗಂಗೆಯ ದಡ

೫೭ ಅಗಚಾಟ್ಲು-ತೊಂದರೆ

೫೮ ಗಂಟುಗ್ಯಾಳಿ-ವ್ಯಭಿಚಾರಿ

೪ ಕಜ್ಜ-ಕಾರ್ಯ

೧೫ ಅನಲ-ಬೆಂಕಿ

೨೧ ವಾಮದಲಿ-ಎಡಗಡೆ

೨೨ ನಾಣು-ನಾಚಿಕೆ

೪೦ ವಕ್ತೃ-ಮಾತನಾಡುವವನು

೪೮ ನವಜಲದ-ಹೊಸ ಮೇಘ

೫೨ ಗಾವಿಲ-ದಡ್ಡ

೫೩ ರುತ-ಶಬ್ದ

೫೪ ಮಹಿತ-ಮಹನೀಯ

೫೬ ವಿರತ-ವಿರಕ್ತ

೫೯ ದೈವಜ್ಞ-ಜೋಯಿಸ

೬೦ ಸಾಣೆಸಿದ-ಸಾಣೆಹಿಡಿದ
೬೦ ಸಮರ ವಿಜಯಿ-ಯುದ್ಧದಲ್ಲಿ ಗೆದ್ದವ
೬೦ ಸುಸಿಲ್-ಸಂಭೋಗ
೬೦ ಪಿಸುಣ-ಜಿಪುಣ
೬೨ ಅಗಡುದನ-ಹದ್ದು ಮೀರಿದ ದನ
೬೨ ಅನುನಯ-ವಿಶ್ವಾಸ
೬೪ ವಿತರಣ-ಔದಾರ್ಯ
೬೬ ಮಲಿನ ಮಾನಸ-ಮನಸ್ಸು ಕದಡಿದ
೬೮ ಕರಣ ಶಕ್ತಿ-ಇಂದ್ರಿಯ ಪಟುತ್ವ
೭೦ ದುರ್ಮಂತ್ರ-ಕೆಟ್ಟ ಮಂತ್ರಿಗಳ ಬೋಧೆ
೭೨ ಮೃಗಕುಲ-ಜಿಂಕೆ ಬಳಗ
೭೭ ಧನದ-ಶ್ರೀಮಂತ
೭೯ ಅಸತಿ-ಪತಿವ್ರತೆಯಲ್ಲದವಳು
೮೨ ಆಕಲ್ಪ-ಕಲ್ಪಾಂತದ ವರೆಗೆ
೮೫ ಗುಣಲುಬ್ಧ-ಗುಣಕ್ಕೆ ಆಸೆಪಡುವ
೮೬ ದಶಪುತ್ರವತಿ-ಹತ್ತು ಮಕ್ಕಳನ್ನು ಹಡೆದವಳು
೯೧ ಪ್ರಮದೆ-ನವ ಯುವತಿ
೯೬ ಕಂದಮೂಲ-ಗೆಡ್ಡೆ ಗೆಣಸು
೯೮ ತನುಯಷ್ಟಿ-ಕೋಲಿನಂತಿರುವ ಶರೀರ
೧೦೦ ತಿರಿತಂದು-ಬಿಡಿಸಿ ತಂದು
೧೦೦ ಸರಸತಿ-ಸರಸ್ವತಿ

೬೦ ಶರದ ನದಿ-ಶರತ್ ಕಾಲದ ನದಿ
೬೦ ಕಲೆಯುಳಿದ-ಒಂದು ಕಲೆ ಮಾತ್ರ ಉಳಿದಿರುವ
೬೦ ಕ್ಲೈಬ್ಯ-ನಪುಂಸಕತನ
೬೦ ಅನೃತ-ಸುಳ್ಳು
ಅವಿನೀತೆ-ವಿನಯವಿಲ್ಲದವಳು
೬೩ ನೇಸರ-ಸೂರ್ಯ
೬೪ ಸುದತಿ-ಒಳ್ಳೆ ದಂತವುಳ್ಳವಳು
೬೬ ಪಾಪಪಂಕ-ಪಾಪವೆಂಬ ಕೆಸರು
೭೧ ಸಾರಸ-ಸಾರಸ ಪಕ್ಷಿ
೭೧ ಗಣಿಕೆ-ವೇಶ್ಯೆ
೭೬ ಕೃಪಣ-ಜಿಪುಣ
೭೭ ಹರಣ-ಅಪಹರಣ
೭೯ ಅಬುಧ-ಅವಿದ್ಯಾವಂತ
೮೩ ದುರ್ನೀತಿ-ಕೆಟ್ಟ ನೀತಿ
೮೬ ಪಚಿಸು-ಅಡಿಗೆ ಮಾಡು
೮೬ ಸಕುಲೀನ-ಸದ್ವಂಶದವ
೯೦ ವಿಬುಧವರ-ಒಳ್ಳೆ ವಿದ್ವಾಂಸ
೯೬ ಪವನ-ಗಾಳಿ
೯೭ ನಾಣಿಲಿ-ನಾಚಿಕೆಯಿಲ್ಲದ್ದು
೯೯ ದಹಿಸದ-ಸುಡದ
೯೯ ಸಂತ ಸಸಿಗಳು-ಸತ್ಪುರುಷರೆಂಬ ಗಿಡಗಳು

# ಕೆಲವು ನುಡಿಗಟ್ಟುಗಳು


| | |
|---|---|
| ನಲ್ನುಡಿಗೆ ಸಮನಹವೆ ರಸೆಯ ರಸಗಳ್ | ೪ |
| ಹಿತ ಭಾಷಿಯಾದವನಿಗುಂಟೆ ವೈರಂ | ೧೨ |
| ನಡತೆಯೇ ಬೆಳಕಲ್ತೆ ಬದುಕಿಗೆಂದುಂ | ೧೯ |
| ಅತಿಯೆ ದುರ್ಗತಿಗೆಲ್ಲಕ್ಕೆಬಲ್ಲಾಧನಂ | ೩೧ |
| ನಿಷ್ಫಲಂ ಪಗಲಿನೊಳು ದೀಪೋತ್ಸವಂ | ೩೩ |
| ಆಸೆ ತೊರೆವುದೆ ನರಗ್ಗೆ ಪರಮ ಧರ್ಮಂ | ೩೯ |
| ಮರೆಯುನುಪಕಾರಮಂ ಸುಜನನೆಂದುಂ | ೬೭ |
| ಕಾಂಚನಂ ಬದಲಿಪುದೆ ತನ್ನ ಗುಣವಂ | ೬೬ |
| ಹಿರಿಯರಾಶ್ರಿತರಲ್ಲಿ ಕೀಳನೆಣಿಸರ್ | ೬೯ |
| ವಿರಳ ಸುಜನರ್ ಖಲರು ತುಂಬಿದಿಳೆಯೊಳ್ | ೧–೨೧ |
| ಸುಜನ ಸಂಪದ ಮೆಲ್ಲ ಪೆರರಿಗಲ್ತೆ | ೨೩ |
| ಶೀಲಮೇ ಭೂಷಣಂ ಮಿಕ್ಕೆಲ್ಲಕೆ | ೮೦ |
| ಹಿಡಿದುದಂ ಸಾಧಿಸುವರುತ್ತಮಾಂಕರ್ | ೮೪ |
| ಕಷ್ಟಬರೆ ಧೀರನೇಂ ಧೃತಿಗೆಡುವನೇ ? | ೮೫ |
| ಸುಜನರಧಮರ ತೆರದೆ ಗಳಪರೇನು ? | ೯೫ |
| ಮೂರ್ಖನೊಡನಾಟ ತಾಂ ದೂಷ್ಯಮೆನಿಕುಂ | ೧೦೦ |
| ಚಿನ್ನದೊಡವೆಯು ಸುಜನರೆಳಸರೆಂದುಂ | ೩೫ |
| ಕಳೆಗುಂದುವನೆ ಸುಜನ ವಿಪದದಿಂದಂ | ೩೨ |
| ಚಿನ್ನ ಬೆಸೆವೊಲು ಪುಲ್ಲ ಬೆಸೆಯಲಳವೆ ? | ೪೭ |
| ಸರಲಜನಮತಿವಿರಳ ಧರಣಿಯಲ್ಲಿ | ೬೦ |
| ಮಾತು ಮಾನವನೆದೆಯ ದೀಪವಲ್ತೆ | ೬೮ |
| ಸಹವಾಸ ಬೆಸನಗಳ ಬೆಸುಗೆಯಲ್ತೆ | ೨೦ |
| ಪತಿವಿರಹಮೇ ಮುಪ್ಪುಮಹಿಳೆಯರಿಗೆ | ೨೫ |
| ಮಾತುಬಲ್ಲವ ತರನೆ ಮಾಣಿಕ್ಯಮಂ? | ೬೮ |
| ನಾಲಗೆಯೆ ಹೊಣೆ ಏಳು ಬೀಳುಗಳಿಗೆ | ೮೧ |
| ಮುಕ್ಕಣ್ಣಗಾದರುಂ ಮೂರ್ಖನವಶಂ | ೮೨ |

ಬೆಳೆಯ ಗುಣ ಮೊಳೆಯಲ್ಲೆ ತಿಳಿಯಲಕ್ಕುಂ ೮೨
ನೇಮವಿಲ್ಲದ ನರನ ಬಾಳು ಹಾಳು ೮೯
ರವಿಗೆ ಕೈದೀವಿಗೆಯ ಬೆಳಕು ಬೇಕೆ ? ೯೬
ಪುಣ್ಯವಶದಿಂ ಜಸವು ಲಭಿಪುದಿಳೆಯೊಳ್ ೯೨
ಮಾತು ಜ್ಯೋತಿರ್ಲಿಂಗಮೆಂಬರಲ್ತೆ ! ೭
ನುಡಿದಂತೆ ನಡೆವನೇ ವ್ರುಡನಿಷ್ಠೆಯಂ ೧೫
ಸತಿಗೆ ಪತಿ ಶಿಶ್ರೂಷೆ ಸಗ್ಗಮೆನಿಕುಂ ೧೨
ಪತಿ ಸೇವೆಯೊಳೆ ಸತಿಗೆ ಮುಕುತಿ ನಿರುತಂ ೭೦
ಕರಣಗಳ ಗೆದ್ದವಂ ಶರಣನೆನಿಪಂ ೩೦
ಒಡೆಯನಿಲ್ಲದ ಸೈನ್ಯ ಗೆಲುವುದುಂಟೆ ? ೩೭
ಮನೆಗೆ ಮಂಗಳದೀಪ ಗೃಹಿಣಿಯಲ್ತೆ ! ೫೨
ನಾಕ-ನರಕದ ದಾರಿ ನಾರಿಯಲ್ತೆ ! ೮೬
ಧರ್ಮ-ಕೀರ್ತಿಗಳೆರಡೆ ಸುಸ್ಥಿರಂಗಳ್ ೮೪
ಮನವೊಲಿದ ಮಾರ್ಗದಲಿ ನಡೆಯೊ ಮನುಜ! ೯೬
ಮಾರನುಪಟಳಕುಂಟೆ ಮರ್ಮ ಜಗದೆ ? ೯೮
ನಿಷ್ಕಾಮಿಗುಂಟೇನು ಸೊಗಸಿನಾಸೆ ? ೫೭
ಪುಲ್ಲಿಗೆಣೆ ನಿಸ್ಪೃಹಗೆ ವಿಶ್ವಮೆಲ್ಲಂ ೮೨
ಮಾಟ ಮಾನವನತುಳ ಭಾಗ್ಯಮಲ್ತೆ ! ೯೯
ಜನರೊಲಿಯೆ ಸಿದ್ಧಿಸದ ಕಜ್ಜಮುಂಟೆ ? ೪
ಮಾನವೇ ಮಾತೆಯರ ಜೀವಮಲ್ತೆ ! ೭೬
ನಾರಿಯೊಲಿವುದು ನರನ ಪುಣ್ಯಮಲ್ತೆ ! ೭೨
ವಿಶ್ವಮುಂ ತೃಣಕೆ ಸಮ ನಿಸ್ಪೃಹಂಗೆ ೩೩
ಸುಜನರಿಂಗೆ ಶ್ರೇಯಸ್ಸಿನಾಸೆಯೇಕೆ ? ೫೨
ಅಧಮರನುನಯಕಿಂತ ಸಾವು ಲೇಸು ೬೭
ಮನೆಹತ್ತಿದೊಡೆ ಕೂಪಖನನವೇಕೆ ? ೬೮
ವಿಷದಮಡಸಿದ ನರಗೆ ಮತಿಯುಮುಂಟೆ ? ೨೨
ಸಂತೋಷವೋ ನರಗೆ ಜೀವಮಲ್ತೆ ! ೯೬

## ಪದ್ಯಗಳ ಅಕಾರಾದಿ


| | | | |
|---|---|---|---|
| ಅಕ್ಷರಿಲ್ಲದ ಮುಖವು | ೯೪ | ಅರಸಂಚೆಶೋಭಿಪುದೆ | ೯೮ |
| ಆಗಡು ದನಗಳಿಗಿಂತ | ೧ | ಅರಳಿಸಂ ದಿನದಿನಂ | ೧೦೦ |
| ಅಗಲಿದೊಡೆ | ೪೦ | ಅರಿವೆಯಾಡಂಬರವೆ | ೫೫ |
| ಅಜ್ಞರಂ ಗೌರವಿಸಿ | ೬೭ | ಅಲಸನಿಗೆ ಸದ್ವಿದ್ಯೆ | ೪೭ |
| ಅಜ್ಞಾನದಿಂ ಕೆಲರು | ೬ | ಆಲಸರುಂ ವಂಚಕರು | ೬ |
| ಅಡಿಯನಿಡು | ೪೪ | ಅಸ್ತ್ರವಿಲ್ಲವೆ | ೪೪ |
| ಅತಿದಾನದಿಂ ಬಲಿಗೆ | ೨ | ಆಳವಡದು ಗೌರವಂ | ೪೩ |
| ಅತಿಥಿಗಳು ಬಾಲಕರು | ೫೮ | ಆರ್ಜಿಪುದು ಪುಣ್ಯಮನೆ | ೭೮ |
| ಅರ್ಥಶೌಚಮನುಳಿದು | ೬೯ | ಆಟೋಪದಿಂದೈದಿ | ೭೨ |
| ಅರ್ಥ ತನ್ನದು ಎಂದು | ೯೭ | ಆಡುಗಳ ಹೋರಾಟ | ೩೪ |
| ಅಧರ ಕಹಿಯಾದರುಂ | ೨೦ | ಆದರಿಸುವವರಾರು | ೯೮ |
| ಅರ್ಥಕೊಡ ತುಳು ತಳುಕಿ | ೯೯ | ಆದಾಯಕಿಂ ಮಿಗಿಲು | ೭೦ |
| ಅಧಿಕಾರನಡೆವಂದು | ೨೩ | ಆಪಡೆ ವಿಪಿನದಲಿ | ೬೯ |
| ಅನ್ನದಾನವು ಮೇಲು | ೫೪ | ಆಪತ್ತಿನೊಳು ಧೈರ್ಯ | ೪೧ |
| ಅನ್ಯಾಯದಿಂ ಗಳಿಸಿ | ೨ | ಆಯುಸ್ಸು ಐಶ್ವರ್ಯ | ೫೦ |
| ಅನುಚಿತವನೆಸಗುವುದು | ೭೬ | ಆವನಾವನ ಭಾವ | ೬೭ |
| ಅನೃತ ನುಡಿವುದಕಿಂತ | ೯೪ | ಆರು ಮರಿಯದ ದಾನ | ೮೨ |
| ಅಪಕಾರಿಯಾದವನ | ೧೪ | ಆಳದಿಂದಾಡೈದು | ೨೫ |
| ಅಪಮಾನವಾದೊಡಂ | ೫೭ | ಆಳರಸು ಭೇದಗಳ | ೮೭ |
| ಅಪ್ಪಣೆಯ ಮೀರುವುದು | ೫೬ | ಇಂತು ಕನ್ನಡ ನುಡಿಯ | ೧೦೧ |
| ಅಪ್ರಿಯವನೆಸಗಿದರು | ೬೯ | ಇಂದ್ರಿಯಂಗಳನೆಲ್ಲ | ೩ |
| ಅಬುಧಕವಿ | ೮೫ | ಇಂದ್ರಿಯಗಳಡಿಯಪ್ಪವು | ೬೧ |
| ಅಭಿಮಾನಿಗಳು ಕೂಡಿ | ೭೯ | ಇರುವೆ ಗಳಿಸಿದ ದವಸ | ೩೯ |
| ಅಭಿಷೇಕವೆಸಗಿಲ್ಲ | ೧೬ | ಇರುವುದೇಂ ಸೌಂದರ್ಯ | ೬೭ |
| ಅಮೃತಮುಂ ವಿಷದಿಂದೆ | ೩೭ | ಇಲ್ಲ ನವ ಮಾಣಿಕ್ಯ | ೪೯ |
| ಅರಸಂಚೆಯೊಳು ಬಿಳುಪು | ೬೬ | ಉಚಿತವೊ ಅನುಚಿತವೊ | ೯೩ |
| ಅರಸಂಚೆ ಬೆಳಗುವುದು | ೯೮ | ಉಚಿತಮಲ್ಲದಕಾರ್ಯ | ೧೦೦ |
| ಅರಸರಾಸ್ಥಾನದಲಿ | ೮೬ | ಉಣಬೇಕು ಕೊಡಬೇಕು | ೧೧ |

| | | | |
|---|---|---|---|
| ಉದಂಪುವಲಿ ರವಿ ತಾನು | ೧೫ | ಕನ್ನೆವರರೂಪಮಂ | ೭೪ |
| ಉದ್ಯೋಗವೊಳ ಜಗಳ | ೪೪ | ಕಮಲದಿಂ ಕಾಸಾರ | ೮೦ |
| ಉದ್ಯೋಗಿಯುಂ ಬಿಡದೆ | ೮೧ | ಕರಗಿಸಲು ಲೋಹಗಳು | ೬೫ |
| ಉಪಕಾರ ಮಾಡುವುದು | ೧೨ | ಕರೆಯದೊಳನುಗ್ಗುವದು | ೬೮ |
| ಉಪಕಾರಿಗುಪಕೃತಿಯ | ೭೫ | ಕಲ್ಲಿನಲಿ ಕಾಷ್ಟದಲಿ | ೭೮ |
| ಉರುಳಿಸುವುದತಿಸುಲಭ | ೬೭ | ಕಲ್ಲಿನಲಿ ಕಂಭದಲಿ | ,, |
| ಋಣಶೇಷ ರಿಪುಶೇಷ | ೩೫ | ಕಲುಷಿತನ ಕೆಳೆಯು ಬಿಡು | ೩೪ |
| ಋತು ವಸಂತವು ಕಳೆಯೆ | ೯೨ | ಕಲ್ಲುಜಗಿವುದು ನೀರು | ೯೦ |
| ಋಷಿಯಲ್ಲದವನೆಂತು | ೫೮ | ಕಲೆವಂತನಾದರುಂ | ೭೦ |
| ಎಗ್ಗನಿಗೆ ಮನ್ನಣೆಯು | ೬೨ | ಕವಿ ಕವಿತೆ ಯುವತಿಯಂ | ೨೪ |
| ಎಡರುಗಳು ಹಲವಾರು | ೬೩ | ಕವಿ ಕಾವ್ಯದಲಿ ಭಾವ | ೨೩ |
| ಎಡರಡಸೆ ಪಂಡಿತಂ | ೬೫ | ಕವಿವಾಣಿ ಚಂದ್ರಿಕೆಗೆ | ೨೨ |
| ಎಡರುಗಳ ಭಯದಿಂದ | ೬೯ | ಕವಿ ತನ್ನ ನಲ್ನುಡಿಯ | ೨೬ |
| ಎಂತಾದರುಂ ಅಕ್ಕೆ | ೩೫ | ಕವಿಯ ಕಾವ್ಯಾಮೃತದ | ೨೪ |
| ಎದುರಿನಲಿ, ಹೊಗಳುವುದು | ೫೭ | ಕವಿಯಿಲ್ಲದಾಸ್ಥಾನ | ೨೭ |
| ಎರಡು ನಾಲಗೆ ನಾಗ | ೮೩ | ಕವಿಯು ಕಾಣದುದೇನು | ೫೯ |
| ಎಲ್ಲಿ ಗೆಳೆತನ ಬೆಳೆಸ | ೧೦ | ಕಷ್ಟಕಾಲಿಡುವನಕ | ೭೧ |
| ಏಳಿಗೆಯು ದುರ್ಜನಕೆ | ೫೫ | ಕಷ್ಟದಿಂದೆಳೆತನದೆ | ೬೨ |
| ಏಳುವುದು ಮುಂಜಾನೆ | ೪ | ಕಷ್ಟಸಂಕಲೆಯೊಳಗೆ | ೩೧ |
| ಎಳೆತನದೆ ಕುಡಿದಲ್ಪ | ೧೩ | ಕಷ್ಟಸಲಿಲದಿ ಮುಳುಗಿ | ೧೧ |
| ಐವರೊಡನಾಡುವುದು | ೩೭ | ಕ್ಷಯಯುತಂ ವಕ್ರತನು | ೧೫ |
| ಒಂದೆ ವಸ್ತುವು ಮೂರು | ೪೮ | ಕಳಕೊಂಡ ರತ್ನಮಂ | ೨ |
| ಒಳ್ನಡತೆ ನಲ್ವಾತು | ೩೧ | ಕಳ್ಳಗೆಲ್ಲಿಯ ಧರ್ಮ | ೬೧ |
| ಒಳಿತ ಕೆಡುನಡಿಗಳಿಂ | ೨೮ | ಕಳೆದುದಕೆ ಕರುಬವೆಯೆ | ೨೨ |
| ಒಳ್ನುಡಿಗೆ ಒಲಿಯುವುವು | ೩೭ | ಕಳೆದುದಕೆ ಚಿಂತಿಸರು | ೬೬ |
| ಓರ್ವನೆಸಗಿದ ದೋಷ | ೭೦ | ಕಾಂತೆಯರ ಕಡೆಗಣ್ಣ | ೧೦೧ |
| ಕಂಗೊಳಿಪ ಕೂಸುಗಳು | ೯೧ | ಕಾಡ್ಗಿಚ್ಚಿನಿಂ ಬೆಂದ | ೯೬ |
| ಕಡಮೆ ಪರಿಕರವಿರಲು | ೨ | ಕಾಡುಗಳ ಸುಡುವಲ್ಲಿ | ೪೨ |

ಕಾಣ್ಬರ್ಪೆ ಸಜ್ಜನರು ೮೫
ಕಾಮಿಸಿದಳ್ಳೆವರಿಂ ೪೧
ಕಾಲವು ಬರದಿರೆ · ೫೮
ಕಾವ್ಯಗಳ ರಚಿಸಿದರ್ ೩೩
ಕಾವ್ಯ ಪ್ರಪಂಚಪುಂ ೩೫
ಕಾವ್ಯಾರ್ಥ ರಸದೂಟ ೩೪
ಕಾಳು ಕಾಳಿನ ಮೇಲೆ ೭೫
ಕಿರಿಯನಿಂದಾಪರುಂ ೭೯
ಕುಡಿಯದುದ ಕುಡಿಯುವುದು ೬೩
ಕುದುರೆ ಕಾಲೊದೆತಮುಂ ೩೧
ಕುಲಜನಂ ದುಷ್ಕುಲರು ೯೭
ಕೃತಿಯಾವುದಾದರುಂ ೯೮
ಕೆಲನಿಮಿಷದವಧಿಯಲಿ ೩೪
ಕೆಲವೊಮ್ಮೆ ಕೋಪಿಷ್ಠ ೪೮
ಕೈಗೆ ಚಾಗಂ ಶಿರಕೆ ೩೮
ಕೈಗೆ ಸಿಂಗರ ದಾನ ೫೮
ಕೈಯಿಂದ ಕೊಡಬೇಡ ೪೨
ಕೈಹಾಕದಿರು ಕಂಷ್ಯ ೮೭
ಕೊಟ್ಟು ಪುಟ್ಟಿದಗೆಲ್ಲ ೭೬
ಕೊಟ್ಟು ಪುಟ್ಟಿದ ನರಗೆ ೮೭
ಕೊಡುವವಂ ಕೊಡಿಸುವನೆ ೧೯
ಕೊಡುವೆನೆಂದಾವಗುಂ ೭೯
ಕೊಂಬೆ ಕೊಂಬೆಗೆ ನೆಗೆವ ೮೮
ಕೊಂಬೆಯಿಂ ಕೊಂಬೆಗೆ ೭೭
ಕೋಪ ಕೇಡಿನ ತವರು ೫೯
ಕೋಪೋರಗನ ಮೆಟ್ಟೆ ೭೮
ಕ್ರೋಧ ಭಯವತಿನಿದ್ದೆ ೬೪
ಗಂಗೆಯುರು ಪಾಪಮುಂ ೩೩
ಗಜವು ಮದದಿಂ ೯೭
ಗಡಿಗೆ ಕುಡಿವುದು ನೀರ ೨೦
ಗಳಿಸಿದರ್ಥಕೆ ೪೭
ಗ್ರಂಥಕೋಟಿಯೊಳೊರೆದ ೯
ಗಳಿತಸಿರಿ ನಿಂದಿಪಂ ೩೮
ಗಳಿಸುವೊಡೆ ಗೆಳೆಯರಂ ೭೪
ಗಾಜಿನಾ ಮನೆ ಕಟ್ಟೆ ೨
ಗಾಢವಾಲೋಚಿಸಿದ ೬
ಗುಡುಗಿದರು ಶರದದಲಿ ೧೩
ಗುಣಗರಿಮೆಯಿಂ ನಿರುತ ೭೪
ಗುಣದೋಷವೆರಡನುಂ ೩೭
ಗುಣದೋಷವೆಸಗದೆಯೆ ೭೦
ಗುಣಮನೀಂ ಪರಿಗಣಿಸು ೮೦
ಗುಣರಹಿತನೆಂದಿಗುಂ ೩೩
ಗುಣವಂತನಾವಗಂ ೮೪
ಗುಣಹೀನರಾಗಿರ್ಪ ೧೩
ಗುಪ್ತದರ್ಶನವೆಸಗಿ ೪
ಗೂಗೆ ಪಗಲಲಿ ಕುರುಡು ೫೬
ಗೃಹಪತಿಯು ತಾನೆನಿಸಿ ೪೦
ಗೃಹಿಣಿಯಿಲ್ಲದ ಮನೆಗೆ ೪೩
ಗೆಳೆಯರಂ ತನ್ನವರ ೬
ಗೆಳೆಯರೊಳು ಭಿನ್ನತೆಯ ೭೨
ಚಂದ್ರ ಸಂಜೆಗೆ ೫೩
ಚಕ್ರವೊಂದೇ ರಥಕೆ ೩೨
ಚಳಿಯು ಕಳೆಯೆ ೯೫
ಚಾರಿತ್ರ್ಯ ಸೌಭಾಗ್ಯ ೨೬
ಚಿಂತೆ ಮನುಜಗೆ ಮುಪ್ಪು ೩೬
ಚೋರ ಚಂದ್ರನ ಜರೆವ ೯೬

| | ಪುಟ | | ಪುಟ |
|---|---|---|---|
| ಜಗದಿ ವಿಬುಧರು | ೯೫ | ತಿಳಿಗೇಡಿ ಎಸಗಿದಹ | ೭೬ |
| ಜಗಳ ಲೇವಾದೇವಿ | ೧೦ | ತಿಳಿದವಗೆ ತಿಳಿಯದಗೆ | ೫೪ |
| ಜಯವು ಅವರಿಗೆ | ೭೭ | ತಿಳಿದವರ ಸಂಗದಿಂ | ೮೨ |
| ಜಲದಿ ತೈಲವು | ೪೪ | ತಿಳಿದವರೆ ಕೇವಲಂ | ೮೪ |
| ಜಲ ಬೇಕು ತನಗೆಂದು | ೬ | ತಿಳಿವಿಲ್ಲದೆಯೆ ಬಾಲ್ಯ | ೯೦ |
| ಜಿಪುಣನಿಗೆ ಯಾಚಕಂ | ೪೬ | ತಿಳಿವು ಮುದುಪರೊಳೆಂತು | ೮೪ |
| ಜಿಪುಣ, ಲಕುಮಿ | ೪೭ | ತ್ರಿಪುರ ದಾಹದೆ ಹರಿಯು | ೮೨ |
| ಜೀವನವೊ ಕಡು ಕಿರಿದು | ೨ | ತುಂಬವಿವು ಲೋಕದಲಿ | ೪೬ |
| ಜೂಜಿನೊಳಗಾಸಕ್ತಿ | ೫೨ | ತುದಿಯಿಂದ ಬುಡವರೆಗೆ | ೧೫ |
| ತಂದೆಯಂ ನಿಂದಿಪನೆ | ೮೮ | ತೃಣಕೆ ಸಮ ಸಗ್ಗಮಿದು | ೮೮ |
| ತರ್ಕ ಕರ್ಕಶ ಶಾಸ್ತ್ರ | ೨೬ | ತೇದರೇಂ ಪೆರ್ಚದೇ | ೧೮ |
| ತಣ್ಣೀರ ಮೀಯುವುದು | ೨೮ | ದಯೆಯು ಹೃದಯದಿ | ೫೦ |
| ತನಗೆ ಬೇಕಾವಲ್ಲಿ | ೮೯ | ದಯೆಯಿಂದೆ ದೀರ್ಘಾಯು | ೭೮ |
| ತನ್ನ ನಡತೆಯೊಳೆಷ್ಟು | ೫ | ದಾನಕ್ಕೆ ಸಂಪತ್ತು | ೧೦ |
| ತನ್ನವರ ನಿಂದೆಯಿಂ | ೮೫ | ದಾನದಿಂದೈಶ್ವರ್ಯ | ೮೨ |
| ತನ್ನವರೆ ಆದರೂ | ೮೬ | ದಾನ ಜೇನು ನುಡಿಯು | ೫೨ |
| ತನ್ನ ಶಕ್ತಿಯನಿರದೆ | ೧೦ | ದಾರುಣಾಗ್ರೇಸರಂ | ೩೭ |
| ತನ್ನ ಸುಖ ಬದಿಗಿಟ್ಟು | ೩೦ | ದ್ರಾಕ್ಷೆ ಜೇನ್ಮೊಸರು | ೩೬ |
| ತನ್ನಳವನರಿಯದಲೆ | ೮೮ | ದಿಗ್ವಸನ ಸತಿಗೇಕೆ | ೨೨ |
| ತಮವುಂಡ ದೀಪಶಿಖೆ | ೫೪ | ದೀನಯಾಚನೆಗೈದು | ೬೬ |
| ತ್ಯಜಿಸುವುವು ವೃಕ್ಷಗಳ | ೯೬ | ದುರ್ಜನರ ನುಡಿಕೆಂಡ | ೧೮ |
| ತನುವು ಕುಗ್ಗಿತು | ೧೦೧ | ದುರ್ಜನರು ಸುಜನರಂ | ೧೭ |
| ತನುದಾರ್ಢ್ಯಮಿರುವನ್ನ | ೯೫ | ದುರ್ಜನರ ಬಾಯಿಂದ | ೧೧ |
| ತರುಗಳಿಗೆ ಬಿರುಗಾಳಿ | ೬೦ | ದುರ್ಜನರ ಸಂಪದಕೆ | ೫೪ |
| ತಿರುಕನಿರೆ ತೃಣವೇಕೆ | ೯೬ | ದುಷ್ಟ ಸಂಸರ್ಗದಿಂ | ೬೩ |
| ತಾಯಿ ಸುತಗೆ | ೫೩ | | |

| | ಎಸಳು–ಪದ್ಯ | | ಎಸಳು–ಪದ್ಯ |
|---|---|---|---|
| ದುಗುಡಗಳು ಮೇಲಿಂದ | ೪–೫೯ | ದುಡಿಯುವತ ಕೆಳ ತುಳಿದು | ೫–೩೭ |
| ದುರ್ಮಂತ್ರದಿಂ ನೃಪನು | ೫–೭೦ | ದುರ್ ವೃತ್ತನ ವಿವೇಕಿ | ೪–೯೦ |
| ದುರ್ಲಭಂ ನರಜನ್ಮ | ೨–೨೭ | ದೂರದಲ್ಲಿರುವವಗೆ | ೧–೮೮ |
| ದೂರದಿಂ ಬೆಟ್ಟಗಳು | ೩–೫೮ | ದೂರದೊಳಗಿರ್ದರುಂ | ೧–೬೭ |
| ದೇಶಕಾಲದ ಪರಿಯ | ೫–೩೫ | ದೇಶಾಂತರವನ್ನೈದಿ | ೪–೯೧ |
| ದ್ವೇಷಿಸದೆ ದೂಷಿಸದೆ | ೧–೨೧ | ದೈವಜ್ಞರಿರದೂರು | ೫–೫೯ |
| ದೊರೆವುದತಿ ದುರ್ಲಭಂ | ೫–೧೬ | ದೊರೆಯದುದ ಯತ್ನದಿಂ | ೪–೨೭ |
| ದೋಷಮೇ ಗುಣಮುಕ್ಕು | ೩–೬೭ | ಧನಮದಂ ತಾಗುವುದೆ | ೧–೫೮ |
| ಧನದಿಂದ ಲೋಭಿಯುಂ | ೨–೮೬ | ಧನವ ನೀಂ ರಕ್ಷಿಪುದು | ೩–೯೩ |
| ಧೃತಿಗೆಡರ್ ಸಜ್ಜನರು | ೨–೩೭ | ಧರ್ಮ ಕರ್ಮದ ಬಗೆಗೆ | ೧–೨೮ |
| ಧರ್ಮಾರ್ಥ ಕಾಮಗಳ | ೪–೪೭ | ಧ್ಯಾನದಲಿ ಸಂಗರದೆ | ೨–೯೫ |
| ಧೀರರುರು ತೇಜಮದು | ೨–೫೯ | ನಂಬಿದರ ವಂಚಿಪೊಡೆ | ೪–೭೨ |
| ನಡುಗಾಡಿನೊಳು ಚೆಳೆದ | ೪–೬೮ | ನಡೆಯಬಾರದು ಮುಂದೆ | ೧–೩೫ |
| ನದಿ ತಾನು ಕುಡಿಯುವುದೆ | ೧–೭೩ | ನದಿಯಲ್ಲಿ ನಖಿಯಲ್ಲಿ | ೨–೭೩ |
| ನಭಕೆ ನೇಸರ | ೫–೬೩ | ನನ್ನೊಳಗೆ ತಪ್ಪಿಲ್ಲ | ೪–೧೭ |
| ನಯವಿದನ ಮೃಗಪಕ್ಷಿ | ೨–೮೦ | ನರನ ಯೋಗ್ಯತೆಯಳೆವ | ೫–೧೪ |
| ನವ್ಯಕಾವ್ಯದೊಳಿರ್ಪ | ೨–೧೧ | ನಶಿಸುವುವು ಕಷ್ಟಗಳು | ೪–೩ |
| ನಾಡೆ ನೀಂ ಧನಿಕನ್ನೈ | ೪–೨೯ | ನಾಲಗೆಯ ತುದಿಯಲ್ಲಿ | ೨–೮೧ |
| ನಾಲಗೆಯ ನಲುಗಿಸಂ | ೨–೯೦ | ನಾರಿಯರು ನಲಿವಲ್ಲಿ | ೫–೨೭ |
| ನಾಳೆಯಾರಾರಿಗೇನೇನು | ೧–೩೮ | ನಿಜನನ್ನಿ ಕಾರಂಜಿ | ೪–೮೦ |
| ನಿಜಬುದ್ಧಿ ಕಡುಲೇಸು | ೨–೮೪ | ನಿಜವಲ್ಲವೀವೊಡಲು | ೪–೨೬ |
| ನಿಜಶಕ್ತಿಯಿಂದಲ್ಲಿ | ೪–೫೭ | ನಿಷ್ಫಲಂ ಕಡಲಿನಲಿ | ೧–೩೩ |
| ನೀಚನಾಢ್ಯನಾಗೆ | ೫–೫೪ | ನೀಚರೇಸಂ ಗೈಯ | ೧–೮೪ |
| ನೀತಿಯೊಳಗಾಸಕ್ತಿ | ೨–೩೦ | ನೀತಿಯಿಲ್ಲದ ಸತಿಯು | ೨–೯೪ |
| ಪದಿನಾಲ್ಕು ಲೋಕಗಳು | ೨–೫ | ಪಲ್ಲಕ್ಕಿಯೊಳು ಕುಳಿತು | ೩–೪೮ |
| ಪರರಿಗಾಗಿಯೆ ಕರ್ಮ | ೧–೩೯ | ಪರರೆಸಗಿದುಪ್ರಕೃತಿಯ | ೧–೬೩ |

| | |
|---|---|
| ಪರರಿಂದಮುಪಕಾರ | ೨-೩೮ |
| ಪರಸತಿಯ ತಾಯಂತೆ | ೩-೬೪ |
| ಪರಿಣಯದ ಸಮಯದಲಿ | ೮-೧ |
| ಪ್ರಸ್ತಾರವೇ ಮಿಗಿಲು | ೨-೯೬ |
| ಪಾಪಮಂ ಪರಿಹರಿಪ | ೨-೪೧ |
| ಪಾವುಗಳ್ ಪವನಮಂ | ೫-೯೬ |
| ಪುಲ್ ಹಗುರಮದಕಿಂತ | ೨-೬೯ |
| ಪೆಣ್ ಪಸುಳೆ | ೨-೬೪ |
| ಪ್ರೇಮವೆಂಬುದೆ ಬೇಹ | ೧-೯೭ |
| ಪೊಲ್ಲದುದನೆಸಗಿದರೂ | ೪-೪೧ |
| ಬಡವ ಕೆಡುನುಡಿ | ೧-೮೮ |
| ಬಂಧುವರನುಪಚರಿಸೆ | ೪-೧೬ |
| ಬದುಕಿರಲು ನಲಸ ಗುಣಪರಿ | ೫-೩ |
| ಬದುಕು ಗುಡದಾ ನಾಡು | ೨-೬೨ |
| ಬಲ್ಪುಣಿಸು | ೧-೧೪ |
| ಬರಿಗೈಯಲ್ಪೋಪದಿರು | ೩-೯೨ |
| ಬ್ರಹ್ಮವಿದತಾನೆಂದು | ೩-೩೭ |
| ಬಹುದಿನದ ಬಯಕೆಗಳು | ೫-೫೬ |
| ಬಾಯೊಳಗೆ ಕಡಿವಾಣ | ೧-೯೫ |
| ಬಾಲರವಿ ಮೆಟ್ಟುವನು | ೫-೪೬ |
| ಬುವಿಯಲ್ಲಿ ಬೇವುಸುರ | ೧-೭೧ |
| ಬೆಂಕಿಯಲಿ ಬೆಂದದ್ದು | ೩-೪೫ |
| ಬೆಳದಿಂಗಳಿಂ ಜಗವ | ೧-೫೪ |
| ಬೇಡ ಬಹುಜನವೈರ | ೪. ೭೩ |
| ಬೇವುಸಸಿ ಪಾತಿಯಲಿ | ೩-೯೧ |
| ಭಟನಳವ ಕಾಳಗದೆ | ೨-೮೭ |
| ಭಾರತೀಲತೆಯೊಳಗೆ | ೨-೬ |
| ಪರಪುರುಷರನವರತ | ೩-೩೬ |
| ಪರರಿಗನುಕೂಲೆಯುಂ | ೫-೮೬ |
| ಪ್ರತಿಮಾಸದೊಳಗುಭಯ | ೨-೯೭ |
| ಪಾಪಪುಣ್ಯಗಳೆಂಟು | ೧-೯ |
| ಪಾಲ್ಗಡಲ ಕಡೆವಂದು | ೨-೫೨ |
| ಪ್ರಾಣದೊಳು ತನುಗೆ ನಿತು | ೪-೧೧ |
| ಪೆಣ್ ಜಿಂಕೆಕಣ್ಣುಗಳಿಗಂ | ೧-೮೩ |
| ಪೆಣ್ಣು ತುಪ್ಪದ ಗಡಿಗೆ | ೩-೯೪ |
| ಪೊರೆವ ಪಿತನೆಳೆತನವೆ | ೫-೨೬ |
| ಬಗೆಯದಿರು ಕೇವಲಂ | ೪-೧೫ |
| ಬಡವ ರೋಗ ಗ್ರಸ್ತ | ೩-೪ |
| ಬಂಧ ಸುಖಮೆಂತೆಂತು | ೪-೨೨ |
| ಬದುಕಲೇಂ ಬೆದರುವೆಹೋ | ೪-೨೩ |
| ಬಲ್ಲವಂ ಬಲ್ಲಿದನ | ೫-೧೭ |
| ಬಲವುಂಟೆ ರೈತನಿಗೆ | ೪-೨ |
| ಬ್ರಹ್ಮವಧೆ ಮಧುಪಾನ | ೨-೬೫ |
| ಬಹು ಜನರು ಕೂಡಿದರುಂ | ೪-೧ |
| ಬಹುಸಹಾಯವ ಪಡೆದ | ೫-೫೦ |
| ಬಾಲಭಾಷಿತವೆಂದು | ೪-೩೭ |
| ಬಿಡಬೇಕು ಜೀವಿಕೆಯ | ೧-೩೪ |
| ಬುವಿ ಸತ್ಯದಿಂದಿಹುದು | ೩-೮೦ |
| ಬೆನಕನಾದರುಭಜಿಪ | ೩-೮೯ |
| ಬೆಸನದೊಳು ತಗ್ಗದೆಯೆ | ೨-೪೬ |
| ಬೇಡಿದುದನೀವುವಂ | ೨-೯೧ |
| ಬೊಗಸೆಯಲಿ ತುಂಬಿರುವ | ೧-೯ |
| ಭಾರಮೇಂ ಶಕ್ತನಿಗೆ ೧ ೧೭ | ೩-೯೮ |
| ಭಾವಿ ನೀರ್ ತಾಂಬೂಲ | ೪-೫ |

ಭೂತಾನು ಕಂಪೆಯುಂ ೧-೪೨
ಮಂತ್ರವಲ್ಲದ ವರ್ಣವಿಲ್ಲವು ೩-೨೫
ಮಂದಮತಿ ಇಂದ್ರಿಯಕೆ ೪-೫೩
ಮದವ ಪುಟ್ಟಿಸದಿರ್ಪ ೩-೩೧
ಮನವೆಳಸಿದಂತೆಲ್ಲ ೨-೭
ಮರದಾನೆ ಚತುರಂಗ ೪-೭೯
ಮರೆಯ ಬೇಡ್ಡೆವರಂ ೪-೬೪
ಮಾಟ ಕೂಟಗಳಿಂದ ೨-೭೪
ಮಾಡುವನ ಲಕುಮಿ ತಾಂ ೪-೯೯
ಮಾನ್ಯರಿಗೆ ಮನ್ನಣೆಯು ೧-೫೬
ಮಿತ್ರನಂ ಮೈತ್ರಿಯಿಂ ೫-೬೯
ಮೀನು ಮೊಸಳೆಯು ಮರಿಗು ೨-೯೮
ಮುಗಿಲ ತೆರೆ ಖಲರೊಲವು ೩-೨೨
ಮುಪ್ಪು ಸಾವುಗಳಿಲ್ಲ ೪-೭
ಮೂಢರಾರಂಭಿಸಿದ ೧ ೭೪
ಮೈಮಾತು ಮನಸಿನಲಿ ೨-೩೬
ಯಜಮಾನ ನಿರಡೆಯು ೧-೩೭
ಯಮರಾಜ ಪೀಡಿತರು ೩-೪೩
ಯಾರ ಭುಜವನತರು ೨-೨೫
ಯಾರು ಮಕ್ಕಳ ಪಡೆಯೆ ೩-೪೧
ಯೋಗ್ಯತೆಯ ಪರಿಗಣಿಸಿ ೪-೩೪
ರತ್ನ ರಾಶಿಗಳಿಂದ ೫-೪೮
ರಾಜನೀತಿಯ ಕುಶಲ ೫-೭೮
ರಾವಣನ ಸತ್ಕೀರ್ತಿ ೨-೧೯
ರೂಪ ನರನಿಗೆ ೫-೪೩
ಲೇಖನ ವ್ಯಾಖ್ಯಾನ ೩-೪೭
ಲೋಕೋಪಕಾರ ವಿಧಿ ೫-೬
ಮಂತ್ರವಲ್ಲದ ವರ್ಣವಿಲ್ಲವು ೩-೨೫
ನುಡದಿಯಂ ಧಿಃಕ್ಕರಿಸಿ ೫-೮೭
ಮನವೆಂಬ ಮರ್ಕಟಂ ೩-೬೨
ಮನ್ನಿಪುದು ಮೇಧಾವಿ ೫.೨೫
ಮರುಬುವಿಯ ಮಧ್ಯದಲಿ ೫ ೫೭
ಮಹಿತರಿಗೆ ಲೋಕದಲಿ ೧-೭೬
ಮಾಡಿದುಡ ಮರೆಯುವನ ೨-೮೨
ಮಾನಸವೆ ಚಿಂತಿಸಿದ ೪-೯೭
ಮಿತವಾಗಿ ಬಳಸಿದರು ೧-೪೧
ಮಿಸುನಿ ಮುಚ್ಚಳದಿಂದ ೫-೪೨
ಮುಂಬರುವ ವಿಪದಗಳ ೧-೨೯
ಮುನ್ನೀರ ಮುಳುಗಿದರು ೩-೮೪
ಮೂರ್ಖತ್ವ ಕೊಲಗುವುದು ೧-೨೨
ಮೃಗ ಮಾಂಸ ಭುಂಜಿಸುವ ೧-೯೦
ಮೊದಲಲ್ಲಿ ಮಧ್ಯದಲಿ ೧-೬೬
ಯಜ್ಞಯಾಗವು ಬೇಡ ೩-೧೬
ಯಾಚಕಂ ಪೀಡಿಸಲು ೪ ೪೬
ಯಾರ ಮನೆಯೊಳು ೧-೪೩
ಯಾರೊಳಗೆ ಧಾನ್ಯ ೧-೪೬
ಯೌವನವೆ ಶಾಂತನಂ ೩-೧೬
ರವಿಯು ಪಡುಗಡೆಯುದಿಸಿ ೨-೫೩
ರಾವಣಂ ಪರಸತಿಯ ೫-೭೭
ರಾಹು ಮುಖದಲ್ಲಿರ್ಪ ೧-೯೨
ಲಕುಮಿ ಸತ್ಯವನರಸಿ ೩..೪೦
ಲೋಕಹಿತ ಸುಗುಣಗಳ ೨ ೫೧
ಲೋಭದಿಂ ಪಾಪಗಳು ೩-೫೬

| | | | |
|---|---|---|---|
| ಲೋಭಿಯನೆ ಲೋಕದಲಿ | ೧-೫೦ | ವಪುವ್ವ ಸುಂದರ ಮಾಗೆ | ೫ ೭೪ |
| ವಹ್ನಿಯೊಲು ವನಿತೆಯಂ | ೩-೮೭ | ವಯುಸುಗತ್ತ ಮಾಡೊಡಂ | ೧ ೨೩ |
| ವ್ರಣ ನೊಣವ ಬಯಸುವ್ರುದು | ೫-೯೩ | ವಾಸಿಪ್ಪುಸು ಸಜ್ಜನರ | ೧-೨೦ |
| ವಿದ್ಯೆಯಂ ವಿಪ್ರವರ | ೩-೯ | ವಿದ್ಯೆಯಿಂ ದೇಸಕ್ಕು | ೩-೪೬ |
| ವಿದ್ಯೆ ದಾರಿಯ ಗೆಳೆಯ | ೩-೭೯ | ವಿಧಿ ಜನ್ಮ ಕೊಡುವಂದೆ | ೪-೮ |
| ವಿನಯದಿಂದುನ್ನತರ್ | ೨-೪೩ | ವಿನಯವಿಲ್ಲದವಂಗೆ | ೩-೫೩ |
| ವಿಬುಧ ಕವಿಯಂ | ೨-೧೭ | ವಿಪ್ರದ್ಯಾನದಲಿ | ೧-೨ |
| ವಿಶ್ರಾಂತಿಯಿಲ್ಲದೆಯೆ | ೧-೧೩ | ವಿಷದ ಪಲ್ ಕಳಚಿವರು | ೩-೩೪ |
| ವಿಷಲಿಪ್ತವಾಕ್ಪರುಷ | ೨-೬೮ | ಶರಣಾದನಂ ಪೊರೆಯೆ | ೪-೭೧ |
| ಶಸ್ತ್ರಹತರಿಪುವಿತತಿ | ೫-೮೩ | ಶ್ರವಣ ಕಟುವಾಗಿರಲಿ | ೫-೨೧ |
| ಶಾಸ್ತ್ರದಲಿ ಬಲ್ಲಿದರು | ೪-೧೩ | ಶಿವನೈದು ಮುಖಗಳಲಿ | ೩-೧ |
| ಶೀಲ ಭಾರದಿ ವನಿತೆ | ೩-೨೮ | ಶುಚಿನಾರಿಯರ ಮುಖಂ | ೩-೧೯ |
| ಶ್ರೋತೃವಿಲ್ಲದ ಮೇಲೆ | ೫-೪೦ | ಸಂಕಟದೆ ವೆಂಕಟಾ | ೩-೩೦ |
| ಸಂಗೀತ ಸೌರಭ್ಯ | ೨-೭೨ | ಸಂಗೀತ ಸತ್ಸಂಗ | ೩-೯೬ |
| ಸಂದರ್ಭಕನುಗುಣಂ | ೨-೨ | ಸಂದೇಹಕೆಡೆಯಿತ್ತ | ೪-೯೪ |
| ಸಂಪದಕೆ ಸೌಜನ್ಯ | ೧-೮೦ | ಸಂಪದಗಳೊದಗುವ್ರವ್ರ | ೫-೮೨ |
| ಸಂಪದದೆ ಸುವಿವೇಕ | ೨-೫೭ | ಸಂಸಾರ ವಿಷವೃಕ್ಷ | ೧-೩ |
| ಸ್ವಂತಗುಣಗರಿಮೆಯಿಂ | ೫-೯೪ | ಸಕಲ ಸದ್ಗುಣ ಸೀಮೆ | ೫-೬೪ |
| ಸಕಲ ಸಂಪದದಿಂದೆ | ೪-೬೧ | ಸಚ್ಚರಿತ ಸುತನಾಗೆ | ೫-೭೪ |
| ಸಗ್ಗ ಹುಲ್ಲಿಗೆ ಸಮವ್ವು | ೪-೮೮ | ಸಜ್ಜನರ ಸಂಗದಿಂ | ೧-೮೭ |
| ಸಜ್ಜನರ ಹಾದಿಯಲಿ | ೧-೧೮ | ಸಜ್ಜನರ ಸಾಂಗತ್ಯ | ೨-೩೨ |
| ಸಜ್ಜನರ ಹೃದಯಮೇ | ೧-೯೪ | ಸತ್ಕಾವ್ಯ ಮಯಮಾದ | ೨-೯ |
| ಸತ್ಕವಿಯೊಳುಕ್ಕಿ ಬಹ | ೨-೩ | ಸತ್ಪಾತ್ರವೊಳುಗ್ಗೈದ | ೧-೭೯ |
| ಸತ್ಪಾತ್ರದೊಳುಗ್ಗೈದ ದಾನ | ೧-೫೨ | ಸತಿಸುತರ ಬಾಂಧವರ | ೪-೩೮ |
| ಸತ್ಪಾತ್ರಕನಿಗಿತ್ತ | ೩.೫೦ | ಸದ್ವಂಶದೊಳಗುದಿಸಿ | ೧-೬೧ |
| ಸದ್ವಿದ್ಯೆಯಲಸನಂ | ೫-೨೨ | ಸ್ವಜನರಲಿ ದಾಕ್ಷಿಣ್ಯ | ೧-೮೨ |
| | | ಸ್ವಪ್ರಯೋಜನವಿಲ್ಲ | ೧-೬೪ |

ಸ್ವಜನರಿಂದಪವಾದ ೫-೯೨
ಸಮಯಕ್ಕೆ ತಕ್ಕನುಡಿ ೩-೭೩
ಸಹಜ ಸುಂದರ ವಸ್ತು ೫ ೧೮
ಸಾಮದಿಂದೊಲಿಯುವರ್ ೩-೬೮
ಸಾಲಗುಡುವಾಢ್ಯನುಂ ೧ ೩೬
ಸಾಹಿತ್ಯ ವಿದ್ಯೆಯಲಿ ೨-೨೦
ಸ್ವಾಮಿಯಂ ದೂರುವಂ ೩-೧೩
ಸಿಡಿಲಿನೊಲು ಬಲು ಬಿರುಸು ೨-೪೦
ಸ್ಥಿರಮಲ್ಲ ಜೀವನಂ ೩-೮೮
ಸುಖವಾಗಿ ಜೀವಿಪುದು ೩-೩೯
ಸುಜನ ಮುಖದಲಿ ೧-೭೫
ಸುತನವಂ ನಲ್ಗುಣಗಳಿಂ ೨-೪೭
ಸುಧೆಯಕ್ಕು ಪರದೇಶ ೪ ೫೧
ಸ್ನೇಹವಂ ಪಾತ್ರವಂ ೨-೪೮
ಸೌಜನ್ಯ ದೌರ್ಜನ್ಯ ೧-೮೯
ಹಗೆ ಬೊಮ್ಮ ಮೊಮ್ಮಗಂ ೨ ೫೪
ಹತ್ತಿರವೆ ಬಹುತೊಡಕು ೩-೫
ಹರ ಕಾಲಕೂಟವಂ ೧-೯೯
ಹಿಡಿದ ಕೆಲಸವ ಬಿಡದೆ ೧-೧೧
ಹಿತ ಬಯಸುವೊಡೆ ೨-೫೮
ಹೀನರಾಶ್ರಯ ಹೊಲ್ಲ ೪-೪೯
ಹೆರರಿಗುಪದೇಶಿಪೊಡೆ ೩-೨೬
ಹೆರರನಾಶ್ರಯಿಸುವರ್ ೫-೯
ಹೊಳೆಯ ತಡಿಯೊಳು ನಿದ್ದೆ ೫-೩೯
ಸನ್ಮಿತ್ರನಂ ಪಡೆದ ೪-೬೦
ಸಸ್ಯಗಳ ನೆಲ ಮೆಲಲು ೫-೮೧
ಸಾಣೆಸಿದ ಮಣಿಗಣವು ೫-೬೦
ಸಾರಜ್ಞ ಮಾನಸವೆ ೩-೯೯
ಸಾಲವೆಸಗಿಪ ತಂದೆ ೩.೭೮
ಸ್ವಾರ್ಥಿಗಳ್ ಕೆಲರಿಹರ್ ೨-೫೬
ಸಿಂಹದಿಂದೊಂದನುಂ ೧-೧೦
ಸಿರಿಬರಲು ಹಿಗ್ಗಡೆಯೆ ೧-೫೭
ಸುಖವ ಬಯಸುವ ಮನುಜ ೩-೬೦
ಸುಗುಣ ಮೆಲ್ಲರೊಳಿಹುದು ೫-೭
ಸುಜನರಂ ನಿಂದಿಸಿದ ೫.೧೩
ಸುಧೆಮಾನವಂಗಿಲ್ಲ ೩-೬
ಸುವಿವೇಕಹಿತ ಬೋಧೆ ೪-೫೬
ಸ್ನೇಹಮುಂ ಸಂಭ್ರಮಮು ೩-೪೯
ಸೋಂಬೇರಿಗುಂಟೇನು ೪-೯೮
ಹಣವಿಲ್ಲದವ ದುಃಖಿ ೩-೭೨
ಹನಿಗೂಡಿದರೆ ಹಳ್ಳ ೩-೨೩
ಹಳತಾದು ದೆಲ್ಲಮಂ ೫-೮೮
ಹಿತವ ನುಡಿ ದಿಟವ ನುಡಿ ೩-೭೦
ಹೀನತನದಿಂ ಗಳಿಸಿ ೫-೧೪
ಹೆರರಿಗುಪಕರಿಸುವುದೆ ೨-೪೪
ಹೆರರೊಡವೆ ಹರಣಗಳ ೪-೫೫
ಹೊಸವಸ್ತ್ರ ಹೊಸಶಸ್ತ್ರ ೫-೪೫

| ಪುಟ | ಪಂಕ್ತಿ | ತಪ್ಪು | ಒಪ್ಪು |
|---|---|---|---|
| ೧೪ | ೯ | ಮಧ್ಯದಲ್ಲಿ | ಮದ್ಯದಲಿ |
| ೧೯ | ೪ | ಪದೆಯದೆಂಡೂ | ಪಡೆಯದೆಂದುಂ |
| ೨೫ | ೩ | ಕೊಡುವುದರ | ಕೊಡುವುದದರ |
| ೨೬ | ೧ | ಅರಕ | ಅರಸ |
| ೨೯ | ೧ | ಧೃತಿಗೆಡರ | ಧೃತಿಗೆಡರು |
| ೪೬ | ೧೭ | ಮಂತ್ರವಿಲ್ಲದ | ಮಂತ್ರವಲ್ಲದ |
| ೪೭ | ೧೧ | ಲೊಕೇದಲಿ | ಲೋಕದಲ್ಲಿ |
| ೫೯ | ೧೭ | ಶಿಬಿರು | ಶಿಬಿರ |
| ೬೦ | ೧೪ | ಗೆಡುವುದು | ಗೆಡುವುವು |
| ೭೧ | ೧೭ | ನೆರೆಯ | ನೆರೆಯು |
| ೮೯ | ೪ | ಬೇಲೆ | ಬೆಲೆ |
| ೯೭ | ೧೯ | ಪರಿಶೋಭಿ | ಪರಿಶೋಭಿಕುಂ |
| ೯೭ | ೨೦ | ರಾಜಿಕುಂಕಂ | ರಾಜಿಕುಂ |
| ೯೮ | ೯ | ಸ್ತ್ರಹತ | ಶಸ್ತ್ರಹತ |